# ಸಿದ್ಧಗಂಗಾ



ದಿನಾಂಕ 6-7-80 ರ ಭಾನುವಾರದಂದು ಶ್ರೀ ಶ್ರೀ (   ) ಸ್ವಾಮೀಜಿಯವರ ಸುವರ್ಣ ಮಹೋತ್ಸವ ಸಮಾರಂಭದ ಪೂರ್ವಸಿದ್ಧತಾ ಮಹಾಸಭೆಯ ಅಧ್ಯಕ್ಷತೆ ವಹಿಸಿದ್ದ ಶಿಕ್ಷಣ ಸಚಿವ ಜೆ.ಬಿ. ಶಂಕರ್‌ರಾವ್ ಶ್ರೀ ಶ್ರೀ ಗೌರೀಶಂಕರ ಸ್ವಾಮಿಗಳು ಶಾಸಕ ಬಿ.ಜಿ. ಭಗವಾನ್ ಮತ್ತು ಶ್ರೀ ಕೆ. ತಿಪ್ಪೇರುದ್ರಯ್ಯನವರು.

ಜುಲೈ, 1980

## 'ಸಿದ್ಧಗಂಗಾ' ಚಿರಾಯುವಾಗಲೆಂದು

### ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು

776. ಸಾಹುಕಾರ ಶ್ರೀ ಬಸವರಾಜಪ್ಪ ಅಂಡ್ ಸನ್ಸ್,
ಟೊಬ್ಯಾಕೊ ಮರ್ಚೆಂಟ್ಸ್, ರಾವಂದೂರು,
ಪಿರಿಯಾಪಟ್ಟಣ ತಾ॥, ಮೈಸೂರು ಜಿಲ್ಲೆ.

777. ಶ್ರೀ ಸಿ. ಎಸ್. ಲೋಕೇಶ್
S/o ಶ್ರೀ ಶಿಹರುದ್ರಯ್ಯ, ಚಿಕ್ಕಹಳ್ಳಿ,
ತುಮಕೂರು ತಾ॥.

778. ಶ್ರೀ ಬಿ. ಬಸವರಾಜು S/o ಶ್ರೀ ಭೀಮಯ್ಯ,
ಕೊಡಿಗೇಹಳ್ಳಿ, ತುರುವೇಕೆರೆ ತಾ॥
ತುಮಕೂರು ಜಿಲ್ಲೆ.

779. ಶ್ರೀ ಸಿದ್ಧಬಸವಯ್ಯ S/o ಶ್ರೀ ಕೆಂಜೇಗೌಡ,
ಎನ್. ಮಾವಿನಹಳ್ಳಿ, ತುರುವೇಕೆರೆ ತಾ॥
ತುಮಕೂರು ಜಿಲ್ಲೆ.

780 ಶ್ರೀ ಎನ್. ಮುನಿಯಪ್ಪ S/o
ಶ್ರೀ ದೊಡ್ಡನಾರಾಯಣಪ್ಪ, ಅಣ್ಣೇಶ್ವರ,
ದೇವನಹಳ್ಳಿ ತಾ॥, ತುಮಕೂರು ಜಿಲ್ಲೆ.

781. ಶ್ರೀ ಆರ್. ಮುನಿಶಾಮಪ್ಪ, ಹಿತ್ತರಹಳ್ಳಿ,
ಸೂಲಿಬೆಲೆಮಾರ್ಗ, ಬೆಂಗಳೂರು ಜಿಲ್ಲೆ.

782. ಶ್ರೀ ಎಸ್. ಎನ್. ಸತ್ಯಕುಮಾರ್ S/o
ಶ್ರೀ ಎನ್. ಎಸ್ ಬಿದಲೂರು,
ಮುದ್ದನಾಯಕನಹಳ್ಳಿ, ದೇವನಹಳ್ಳಿ ತಾ॥
ಬೆಂಗಳೂರು ಜಿಲ್ಲೆ.

783. ಶ್ರೀ ಎಂ. ಎಸ್. ಜಯಶಾಂತಪ್ಪ,
ಶೈಲಾ ಪ್ರಾವಿಷನ್ ಸ್ಟೋರ್ಸ್,
ಚಿಕ್ಕಬಳ್ಳಾಪುರ ತಾ॥ ಕೋಲಾರ ಜಿಲ್ಲೆ.

784. ಶ್ರೀ ಎಸ್. ನಂಜಪ್ಪ, ಅಸಿಸ್ಟೆಂಟ್ ಇಂಜಿನಿಯರ್
ಕೆ. ಇ ಬಿ ಆಫೀಸ್, ಚಿಕ್ಕಬಳ್ಳಾಪುರ,
ಕೋಲಾರ ಜಿಲ್ಲೆ.

785. ಶ್ರೀ ಬಿ. ಎಸ್. ಗುರುಲಿಂಗಾರಾಧ್ಯ,
S/o ಶ್ರೀ ಸಿ. ಬಿ. ಸದಾನಂದ,
ನಿವೃತ್ತ ಹೆಲ್ತ ಇನ್ಸ್‌ಪೆಕ್ಟರ್.
ಮಿಲ್ಲರಪೇಟೆ, ಬಳ್ಳಾರಿ ಜಿಲ್ಲೆ.

786. ಶ್ರೀ ಜಿ. ಆರ್. ಗಣೇಶ್ & ಬ್ರದರ್ಸ್,
ವಿಜಯನಗರ, ಬೆಂಗಳೂರು – 40

787. ಶ್ರೀ ದಕ್ಷಿಣಾಮೂರ್ತಿ,
ಜೂನಿಯರ್ ಇಂಜಿನಿಯರ್,
ವಿಜಯನಗರ, ಬೆಂಗಳೂರು - 40

788. ಶ್ರೀ ಜಿ. ಬಿ. ಪರಮಶಿವಯ್ಯ,
ರಾಜಾಜಿನಗರ, ಬೆಂಗಳೂರು - 10

789. ಶ್ರೀ ಆರ್. ಪಿ. ಪುಟ್ಟಬುದ್ಧಿ,
ರೀಡರ್ ಇನ್ ಎಜುಕೇಷನ್,
ಸಿದ್ಧಗಂಗಾ ಕಾಲೇಜ್ ಆಫ್ ಎಜುಕೇಷನ್,
ತುಮಕೂರು.

790. ಶ್ರೀ ವಿ. ಪಿ. ಗಂಗಣ್ಣ ಸೆಕ್ರೆಟರಿ,
ಕೈಗಾರಿಕಾ ಸಹಕಾರಿ ಬ್ಯಾಂಕ್. ತುಮಕೂರು.

( ಮುಂದುವರಿಯುತ್ತದೆ )



## ಶ್ರೀವಾಣಿ

ಸೃಷ್ಟಿಕರ್ತನಾದ ಭಗವಂತನು ಮೊದಲು ಪಂಚಭೂತಗಳನ್ನು ತಾನು ಸೃಷ್ಟಿಸಿದ. ನಂತರ ಅಪಾರ ಸಸ್ಯವರ್ಗವನ್ನು ಸೃಷ್ಟಿಮಾಡಿದ. ಆಮೇಲೆ ಲಕ್ಷೋಪಲಕ್ಷ ಪ್ರಾಣಿವರ್ಗವನ್ನು ಸೃಷ್ಟಿಮಾಡಿದ. ಇಷ್ಟೆಲ್ಲಾ ಆದ ಮೇಲೆ ತನ್ನ ಸೃಷ್ಟಿಯನ್ನು ಒಮ್ಮೆ ಅವಲೋಕನ ಮಾಡಿದ. ಆಗ ಆ ಸೃಷ್ಟಿಕರ್ತನಿಗೆ ಸಮಾಧಾನವಾಗಲಿಲ್ಲ. ಕಾರಣ : ಇನ್ನೂ ತನ್ನ ಸೃಷ್ಟಿ ಪೂರ್ಣವಾಗಿಲ್ಲ; ಏನೋ ಕೊರತೆಯಿದೆ ಎಂದುಕೊಂಡ. ಯಾವ ಒಂದು ವರ್ಗವನ್ನು ಸೃಷ್ಟಿಸಿದರೆ ಸೃಷ್ಟಿಕಾರ್ಯ ಪೂರ್ಣವಾಗುತ್ತದೆಯೋ ಅಂತಹ ವರ್ಗವನ್ನು ತನ್ನೆಲ್ಲಾ ಶಕ್ತಿಯನ್ನು ತುಂಬಿ ಸೃಷ್ಟಿಮಾಡಿದ. ಆ ವರ್ಗಕ್ಕೆ ವಿಶೇಷವಾದ ಬುದ್ಧ್ಯಾದಿ ಶಕ್ತಿ ಸಂಪತ್ತನ್ನು ಕರುಣಿಸಿದ. ವಿವೇಚನಾಶಕ್ತಿಯನ್ನು ತುಂಬಿದ. ಆ ವರ್ಗವೇ ಮನುಷ್ಯವರ್ಗ. ಈ ಮನುಷ್ಯವರ್ಗ ಸೃಷ್ಟಿಯಿಂದ ಸೃಷ್ಟಿಕರ್ತನಿಗೆ ಸಮಾಧಾನವಾಯಿತು. ಸಂತೋಷವೂ ಆಯಿತು. ಆದ್ದರಿಂದ ಪರಮಾತ್ಮ ಕರುಣಿಸಿದ ಈ ಮಾನವ ಜನ್ಮ ಅಲಭ್ಯಲಾಭವಾದುದು. ಅದನ್ನೇ ಪುರಂದರ ದಾಸರು "ಮಾನವಜನ್ಮ ಬಹುದೊಡ್ಡದು ಅದನ್ನು ಹಾಳುಮಾಡಿಕೊಳ್ಳಬೇಡಿರೊ ಹುಚ್ಚಪ್ಪಗಳಿರಾ" ಎಂದು ಮಾರ್ಮಿಕವಾಗಿ ನುಡಿದರು. ಪರಮಾತ್ಮನು ಯಾವಶಕ್ತಿ ಸಂಪತ್ತುಗಳನ್ನು ಮಾನವನಿಗೆ ಕರುಣಿಸಿದ್ದಾನೆಯೋ ಅವುಗಳನ್ನು ಯೋಗ್ಯವಾದ ರೀತಿಯಲ್ಲಿ ಬಳಸಿಕೊಂಡು ಅವನ ಕರುಣೆಗೆ ಪಾತ್ರರಾಗಬೇಕು. ಅದರಿಂದ ಶಕ್ತಿ ಸಂಪತ್ತುಗಳನ್ನು ಕರುಣಿಸಿದ ಪರಮಾತ್ಮನಿಗೂ ಸಂತೋಷವಾಗುತ್ತದೆ. ಮಾನವನಿಗೆ ಇಹ ಪರ ಪುಣ್ಯವೂ ಲಭಿಸುತ್ತದೆ.

# ‘ಸಿದ್ಧಗಂಗಾ’

ಜುಲೈ ೧೯೮೦

ಸಂಪುಟ–೧೬ ಸಂಚಿಕೆ–೨

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ
ಪಂ|| ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ಅಜೀವ ಸದಸ್ಯತ್ವ: **151-00** ರೂ
ವಾರ್ಷಿಕ ಚಂದಾ: **10-00** ರೂ


## ಈ ಸಂಚಿಕೆಯಲ್ಲಿ



### ಲೇಖಕರಲ್ಲಿ ಮನವಿ

‘ಸಿದ್ಧಗಂಗಾ’ ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೆಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ ‘ಸಿದ್ಧಗಂಗಾ’ ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

“ಸಂಪಾದಕರು”
“ಸಿದ್ಧಗಂಗಾ” [ಕನ್ನಡ ಮಾಸ ಪತ್ರಿಕೆ]
ಶ್ರೀಸಿದ್ಧಗಂಗಾ ಕ್ಷೇತ್ರ–572104 ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1980ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ ‘ಸಿದ್ಧಗಂಗಾ’ ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು
‘ಸಿದ್ಧಗಂಗಾ’ ಮಾಸ ಪತ್ರಿಕೆ, ಸಿದ್ಧಗಂಗಾ ಮಠ–572104 ತುಮಕೂರು ಜಿಲ್ಲೆ.

# ಸಂಪಾದಕೀಯ

ರೈತ ರಾಷ್ಟ್ರದ ಬೆನ್ನೆಲುಬು. ರೈತನ ಪರಿಶ್ರಮದ ಫಲ ನಾಡಿನ ಜೀವಾಳ. ಮೇಟಿ ತಿರುಗದಿದ್ದರೆ ಜಗತ್ತಿನ ರಾಟೆ ತಿರುಗಲಾರದು. ಈ ಮೇಟಿ ವಿದ್ಯೆಗೆ ಕೋಟಿವಿದ್ಯೆಯು ಸಾಟಿಯಾಗಿನಿಲ್ಲದು. ಒಕ್ಕಲಿಗ ಒಕ್ಕದಿದ್ದರೆ ಮಿಕ್ಕವ ಬಿಕ್ಕಬೇಕಾದೀತು. ಮುಂತಾಗಿ ನಾಡಿನ ಅನ್ನದಾತ ರೈತನನ್ನು ಬಾಯಿತುಂಬಾ ಹೊಗಳಿ ಹೊನ್ನ ಶೂಲಕ್ಕೇರಿಸಿದ್ದೇವೆ. ಅವನ ಕಷ್ಟನಷ್ಟಗಳು ಕಣ್ಣಿಗೆ ಕಾಣದಾಗಿವೆ. ಅವು ಪೆಡಂಭೂತವಾಗಿ ಅವನನ್ನು ನುಂಗುತ್ತಿವೆ. ಅವನ ಕಷ್ಟ ಕಾರ್ಪಣ್ಯಗಳು ತಲೆತಲೆಯಾಂತರಕ್ಕೂ ಹೂಳಿಟ್ಟ ನಿಧಿಯಾಗಿವೆ. ಸಾಲದಿಂದ ಹುಟ್ಟಿ ಸಾಲದಿಂದ ಬೆಳೆದು, ಸಾಲದಿಂದಲೇ ಸಾಯುವ ಕಾಲ ಅವನ ಪಾಲಿಗಿದೆ. ಸರಕಾರಗಳಿಂದೊದಗಿಸಿರುವ ಸಾಲಗಳು ಶೂಲಗಳಾಗಿ. ದಿನವಿಡೀ ಇರಿಯುತ್ತಿವೆ. ಚೇತರಿಸಿಕೊಳ್ಳಲು ಶಕ್ತಿ ಹೀನನಾಗಿದ್ದಾನೆ. ನಾಡಿಗೆ ಅನ್ನಕೊಡುವವನು ಹಿಡಿ ಅನ್ನಕ್ಕೆ ಕೈ ಚಾಚಬೇಕಾಗಿದೆ. ಅಧಿಕಬೆಳೆ ತೆಗೆಯಲು ಬಳಸುವ ಗೊಬ್ಬರವು ದುಬಾರಿಯಾಗಿದೆ. ದಿನ ನಿತ್ಯದ ಬಳಕೆ ವಸ್ತುಗಳ ಬೆಲೆಗಳು ರೋಹಿಣಿ ಗ್ರಹದೊಡನೆ ಗಗನಕ್ಕೆ ಪ್ರಯಾಣ ಬೆಳೆಸಿವೆ. ಮೈಮುಚ್ಚುವ ಬಟ್ಟೆಗಳನ್ನು ಕೊಳ್ಳುವುದಕ್ಕೆ ಕೈಯಲ್ಲಿ ಕಾಸಿಲ್ಲ, ಉಣ್ಣಲು ಊಟವಿಲ್ಲ, ಕೆಲಸಮಾಡಲು ಮೈಯಲ್ಲಿ ಶಕ್ತಿಯಿಲ್ಲ, ಅವನ ಸ್ಥಿತಿ ಚಿಂತಾಜನಕವಾಗಿದೆ. ಬಾಳು ಬೀದಿಪಾಲಾಗಿದೆ, ಬದುಕಲು ಬಂಡಾಟವಾಗಿದೆ, ಉಸಿರಿಡಿದು ಸೊರಗುವ ಸ್ಥಿತಿಯೊದಗಿದಾಗ ತನಗುಂಟಾದ ಅನ್ಯಾಯದ ಪರಿವೆಯನ್ನು ಬಯಲಿಗಿಡಲು ಸಜ್ಜಾಗಿ ನಿಂತ. ಎಲ್ಲವಿಧವಾದ ಕರಬಾರ ಹೊರೆಯನ್ನು ಹೊತ್ತ ನಡುಸೊರಗಿ ಬೇಡಿಕೆಯ ಪಟವನ್ನೆತ್ತಿ ಹೆಗಲಲ್ಲಿಟ್ಟುಕೊಂಡು ಬೀದಿಗಿಳಿದುದು ಪ್ರಾಯಶಃ ಇದು ಇತಿಹಾಸದಲ್ಲಿ ಮೊದಲ ಬಾರಿಯೆನಿಸುತ್ತದೆ. ಗಾಂಧೀಜಿಯವರ ಅಹಿಂಸಾಯುಕ್ತ ಚಳುವಳಿಯು ಹಿಂಸೆ, ವಿನಾಶ ಪ್ರವೃತ್ತಿಗಳಕಡೆ ಸಾಗಿದುದು ನಮ್ಮ ನಾಡಿನ ದುರ್ದೈವ. ಹಲವು ಜೀವಿಗಳು ಗುಂಡಿಗೆ ಬಲಿಯಾದುದು, ಕೆಲವು ನಿರ್ಜೀವವಸ್ತುಗಳು ಅಗ್ನಿಗಾಹುತಿಯಾದುದ್ದು ರಾಷ್ಟ್ರಕ್ಕಾದ ಅಪಾರ ನಷ್ಟ. ಈ ವಿನಾಶಕಾರಕ ಪ್ರವೃತ್ತಿಗಳು ನಡೆಯ ಬಾರದಿತ್ತು. ನಡೆದದ್ದು ವಿಷಾದನೀಯ. ಒಲೆಹತ್ತಿಉರಿದರೆ ನಿಲಬಹುದು ಧರೆಹತ್ತಿಉರಿದರೆ ನಿಲಬಹುದೆ, ಈ ಉರಿಯುದಳ್ಳುರಿಯಾಯಿತು. ಪರಿಣಾಮ ರಾಜ್ಯದ ವಿಧಾನಸಭೆಯಲ್ಲಿ ಗಲಭೆ ಚಕಮುಕಿ, ಘರ್ಷಣೆ ಗೊಂದಲಗಳಿಗೆ ಕಾರಣವಾಯಿತು. ಈ ಗಾಳಿ ನಾಡಿನ ಉದ್ದಗಲಕ್ಕೂ ಬೀಸತೊಡಗಿತು. ಪರಿಸ್ಥಿತಿ ದಿನೇ ದಿನೇ ವಿಷಮಿಸತೊಡಗಿತು. ಪರಿಸ್ಥಿತಿಯನ್ನರಿತ ಮಾನ್ಯ ಮುಖ್ಯಮಂತ್ರಿಗಳು ಪರಿಸ್ಥಿತಿಯ ಪರಿಶೀಲನೆಮಾಡಿ ಸರಕಾರದ ಬೊಕ್ಕಸಕ್ಕಾಗುವ ಅಪಾರ ನಷ್ಟವನ್ನು ಗಮನಿಸದೆ 85 ಕೋಟಿ ರೂಪಾಯಿ ಕರಬಾರ ಮುಂತಾದ ಹೊರೆಯನ್ನಿಳಿಸಿ ಅಭಿನಂದನೆಗೆ ಪಾತ್ರರಾದರು. ಕೆಲವು ಸಾಲಗಳ ವಸೂಲಿಯನ್ನು ಮುಂದಕ್ಕೆ ಹಾಕಿರುವುದು, ಮನ್ನಾಮಾಡಿರುವುದು, ನೀರಿನ ಕರಭಾರಕ್ಕೆ ತಡೆಮಾಡಿರುವುದು, ಬೆಳೆಗಳ ವಿಮೆಗೆ ಆಲೋಚಿಸಿರುವುದು ರೈತರಿಗೆ ಸಾಕಷ್ಟು ಪರಿಹಾರ ದೊರೆತಂತಾಗಿದೆ. ಇದು ಸದ್ಯದ ಕಣ್ಣೊರೆಸುವ ಕಾರ್ಯವಾಗದೆ ಕೆಲವು ಅಧಿಕಾರಿಗಳ ಅಧಿಕಾರ ದುಪಯೋಗವಾಗದಂತೆ ನೋಡಿಕೊಳ್ಳುವುದು ಸರಕಾರದ ಆದ್ಯಕರ್ತವ್ಯ. ಆ ರಕ್ಷಣೆ ದೊತಾಗ ರೈತರು ಸುಖ ಸಮೃದ್ಧಿಗಳ ಬದುಕನ್ನು ಸಾಗಿಸಲು ಅವಕಾಶವಾಗುತ್ತದೆ. ಇದಾದಾಗ ಮಾನ್ಯ ಮುಖ್ಯಮಂತ್ರಿಗಳು ಅಧಿಕ ಅಭಿನಂದನೆಗೆ ಒಳಗಾಗುವಕಾಲ ದೂರವಿಲ್ಲ.

## ಅಮೃತ ಬಿಂದು

"ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್" ಎನ್ನುವುದು ಉಪನಿಷತ್ತಿನ ಸೂಕ್ತಿ ಇಲ್ಲಿ ವಿಜ್ಞಾನವನ್ನು ಬ್ರಹ್ಮನೆಂದು ತಿಳಿಯತಕ್ಕದ್ದು. ವಿಜ್ಞಾನವೆಂದರೆ ವಿಶೇಷವಾದ ಜ್ಞಾನ. ಲೋಕ ವ್ಯವಹಾರಕ್ಕೆ ನಿಲುಕದ ವಿಶೇಷ ಶಕ್ತಿಸಾಧ್ಯವಾದದ್ದು ಇದು ಎರಡು ವಿಧವಾದ ಶಕ್ತಿಸಾಧ್ಯತೆಯನ್ನು ಹೊಂದಿರತಕ್ಕದು. ಒಂದು ಇಂದ್ರಿಯ ಶಕ್ತಿ ಸಾಧ್ಯತೆ ಇದನ್ನು ವಿಜ್ಞಾನವೆಂದು ಕರೆಯುತ್ತಾರೆ. ಮತ್ತೊಂದು ಅತೀಂದ್ರಿಯ ಶಕ್ತಿಗೆ ಗೋಚರವಾಗತಕ್ಕದ್ದು, ಇದನ್ನು ತತ್ವಜ್ಞಾನವೆಂದು ಕರೆಯುತ್ತಾರೆ. ಎರಡರಲ್ಲೂ ಆಯಾಯ ಶಕ್ತಿ ಸಾಮರ್ಥ್ಯಕ್ಕೆ ಪ್ರತಿಫಲವಾಗಿ ಬರುವ ಜ್ಞಾನವೇ ವಿಶೇಷ ಜ್ಞಾನ. ಎರಡರ ಗುರಿ ಒಂದೇ ಸಾಧನಾಮಾರ್ಗಗಳು. ಬೇರೆ ಬೇರೆಯಾದರೂ ಅಂತಿಮ ಸಿದ್ಧಾಂತ ಪರಮ ಪುರುಷಾರ್ಥ ಒಂದೇ, ಮಾನವ ಕಲ್ಯಾಣ ವಿಶ್ವ ಕಲ್ಯಾಣ ಹಾಗೂ ವಿಶ್ವಶಾಂತಿ. ಆದರೆ ಅದನ್ನು ಬಳಸುವ ನೈಪುಣ್ಯತೆಯ ನ್ಯೂನತೆಯ ಮೇಲೆ ಅನರ್ಥ ಅಪಾಯಗಳು ಸಂಘಟಿಸಬಹುದು ಅದು ಬಳಸುವ ವ್ಯಕ್ತಿಯ ಬುದ್ಧಿಯ ತಪ್ಪೇ ಹೊರತು ಅದು ಜ್ಞಾನದ ತಪ್ಪಲ್ಲ. ಚಿನ್ನದ ಕತ್ತಿಯು ಕತ್ತನ್ನು ಕೊಯ್ದು ಕಹಿಯನ್ನೂ ಕೊಡಬಹುದು. ರಸಭರಿತ ಹಣ್ಣನ್ನು ಕೊಯ್ದು ಸಿಹಿಯನ್ನು ಕೊಡಬಹುದು. ಬುದ್ಧಿಯು ಅರಿತವಾದಷ್ಟು ಅಪಾಯವೇ ಅಧಿಕವೆಂದು ಭಾವಿಸದೆ ನೈಜಮಾರ್ಗದಲ್ಲಿ ನಡೆಸುವ ಚಲನ ನೈಪುಣ್ಯ ಬೇಕು. ಆಗ ವಿಶೇಷದಜ್ಞಾನ ಸದುಪಯೋಗ ಸಾಧ್ಯ. ಅಜ್ಞಾನದ ನಿರ್ಮೂಲನೆ ಶಾಂತಿಯ ಸ್ಥಾಪನೆಯು ವಿಶೇಷಜ್ಞಾನದ ಮುಖ್ಯ ಗುರಿಯಾದಾಗ ವಿಜ್ಞಾನವೇ ಬ್ರಹ್ಮವಾಗುತ್ತದೆ.

—ದುಂಬಿ.

# ನವನೀತ

**ನಧೈರ್ಯೇಣ ವಿನಾ ಲಕ್ಷ್ಮೀರ್ನ ಶೌರ್ಯೇಣ ವಿನಾ ಜಯಃ।**
**ನಜ್ಞಾನೇನ ವಿನಾ ಮೋಕ್ಷೋ ನ ದಾನೇನ ವಿನಾ ಯಶಃ॥**

ಧೈರ್ಯವಿಲ್ಲದೆ ಹಣವಿಲ್ಲ, ಶೌರ್ಯವಿಲ್ಲದೆ ಗೆಲುವಿಲ್ಲ, ಜ್ಞಾನವಿಲ್ಲದೆ ಮುಕ್ತಿ ದೊರೆಯದು, ದಾನಮಾಡದೆ ಕೀರ್ತಿಯು ದೊರೆಯದು.

—ಸಭಾರಂಜನ ಶತಕ

❁ ❁ ❁

**ಆಯುಃ ಕರ್ಮಂಚ ವಿತ್ತಂಚ ವಿದ್ಯಾ ನಿಧನಮೇನಚ।**
**ಪಂಚೈತಾನ್ಯಪಿ ಸೃಜ್ಯಂತೇ ಗರ್ಭಸ್ಥಸ್ಯೈವ ದೇಹಿನಃ॥**

ಮನುಷ್ಯನು ಇನ್ನೂ ಗರ್ಭದಲ್ಲಿದ್ದಾಗಲೇ ಅವನ ಆಯಸ್ಸು ಕೆಲಸ, ಹಣ, ವಿದ್ಯೆ, ಮರಣ ಇವು ಐದೂಕೂಡ ನಿಶ್ಚಯಿಸಲ್ಪಟ್ಟಿರುತ್ತವೆ.

—ಹಿತೋಪದೇಶ

❁ ❁ ❁

**ಸಂಪತ್ಸು ಮಹತಾಂ ಚಿತ್ತಂ ಭವತ್ಯುತ್ಪಲ ಕೋಮಲಂ।**
**ಆಪತ್ಸು ಚ ಮಹಾ ಶೈಲ ಶಿಲಾ ಸಂಘಾತ ಕರ್ಕಶಂ॥**

ಮಹಾತ್ಮರ ಮನಸ್ಸು ಐಶ್ವರ್ಯ ಬಂದಾಗ ಕನ್ನೈದಿಲೆಯಂತೆ ಮೃದುವಾಗಿರುತ್ತದೆ. ಕಷ್ಟಗಳು ಬಂದಾಗ ದೊಡ್ಡ ಬೆಟ್ಟದ ಮೇಲಿರುವ ಕಲ್ಲುಗಳ ರಾಶಿಯಂತೆ ಕಠಿಣವಾಗಿರುತ್ತದೆ.

❁ ❁ ❁

# ಕ್ಷೇತ್ರ ವಾರ್ತೆ

[ 6-7-80 ರ ಭಾನುವಾರದ ಸಮಾರಂಭದ ವರದಿ ]

—ಪಿ. ಎನ್. ಚಂದ್ರಶೇಖರಯ್ಯ

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸುವರ್ಣಮಹೋತ್ಸವ ಸಮಾರಂಭದ ಪೂರ್ವಸಿದ್ಧತಾ ಸಮಾರಂಭ ದಿನಾಂಕ 6-7-80 ರ ಭಾನುವಾರ ಶ್ರೀಕ್ಷೇತ್ರದಲ್ಲಿ ಸಮಾವೇಶಗೊಂಡಿತ್ತು. ಈ ಸಮಾರಂಭಕ್ಕೆ ನಾಡಿನ ಮಹಾಜನರು, ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳು, ದಾನಿಗಳು, ಅಪಾರ ಅಭಿಮಾನೀ ಬಳಗ ಹಾಗೂ ಅನೇಕ ಮಠಾಧಿಪತಿಗಳೂ ದಯಮಾಡಿಸಿದ್ದರು. ಶ್ರೀ ಕ್ಷೇತ್ರದ ಆಡಿಟೋರಿಯಂನಲ್ಲಿ ರಾಜ್ಯದ ಮಾನ್ಯಶಿಕ್ಷಣ ಸಚಿವರಾದ ಶ್ರೀ ಜೆ. ಬಿ. ಶಂಕರ್‌ರಾವ್ ಅವರ ಘನಅಧ್ಯಕ್ಷತೆಯಲ್ಲಿ, ಶ್ರೀ ಸಿ. ರೇವಣಾರಾಧ್ಯರ ಪ್ರಾರ್ಥನೆಯೊಂದಿಗೆ ಸಭೆಯು ಆರಂಭವಾಯಿತು. ವಿಧಾನಸಭಾ ಸದಸ್ಯರಾದ ಶ್ರೀ ವಿ ಎಲ್. ಶಿವಪ್ಪನವರು ಸಭೆಯಲ್ಲಿ ಹಾಜರಿದ್ದ ಸರ್ವರನ್ನೂ ಸ್ವಾಗತಿಸಿದರು. ಅನಂತರ ನಾಡಿನ ಹಲವುಕಡೆಯಿಂದ ಸಮಾರಂಭಕ್ಕೆ ಶುಭ ಕೋರಿ ಕಳುಹಿಸಿದ್ದ, ಬೆಂಗಳೂರಿನ ಟ್ರೇಡಿಂಗ್ ಕಂಪನಿಯ ಮಾಲೀಕರಾದ ಶ್ರೀ ಎ. ಎಸ್. ಚನ್ನಯ್ಯನವರು, ಕೈಗಾರಿಕೋದ್ಯಮಿ ಶ್ರೀಯುತ ತೋಷ್ನಿವಾಲ್, ಕಾಫಿ ಪ್ಲಾಂಟರ್ ಶ್ರೀ ಬಿ. ಎಸ್. ವಿರೂಪಾಕ್ಷರವರು, ಬೆಂಗಳೂರಿನ ಶ್ರೀಮಹಂತನ ಮಠದ ಅಧ್ಯಕ್ಷರು, ಶ್ರೀ ಬಸವ ಸಮಿತಿ ಮತ್ತು ಎಚ್. ಎಂ. ಟಿ. ಮುಂತಾದವರ ಶುಭ ಸಂದೇಶವನ್ನು ಓದಿದರು. ಶ್ರೀ ಕೆ. ತಿಪ್ಪೇರುದ್ರಯ್ಯನವರು ಸಭೆ ಸೇರಿರುವುದರ ಉದ್ದಿಶ್ಯವನ್ನು ಪರಿಚಯಮಾಡಿಕೊಟ್ಟರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಮಾನ್ಯ ಸಚಿವರು ಶ್ರೀ ಶ್ರೀ ಪೂಜ್ಯ ಸ್ವಾಮೀಜಿಯವರ ಸರ್ವರನ್ನೂ ಆಶೀರ್ವದಿಸುವ ತಪಃ ಪ್ರಭಾವವು ನನ್ನ ಅನಿರೀಕ್ಷಿತ ಆಗಮನಕ್ಕೆ ಕಾರಣವಾಯಿತು. ಶ್ರೀ ಶ್ರೀ ಗಳವರು ಇಡೀ ಕರ್ನಾಟಕ ಜನತೆಯನ್ನು ತಮ್ಮದೆಂದು ಭಾವಿಸಿ, ಜನತೆಯ ಸರ್ವಾಂಗೀಣ ಅಭಿವೃದ್ಧಿಗೆ ಈ ಮೊದಲ 50 ವರ್ಷಗಳಿಂದಲೂ ದುಡಿಯುತ್ತಾ ಬಂದಿದ್ದಾರೆ. ತಪಸ್ವಿಗಳು ಮನಸ್ಸುಮಾಡಿದರೆ ಅವರಿಗೆ ಅಗಾಧ ಕಾರ್ಯವು ಯಾವುದೂ ಇಲ್ಲವೆನ್ನುವುದನ್ನು ಆಚರಿಸಿ ಆ ತಪಸ್ಸಿನ ಸಿದ್ಧಿಯನ್ನು ಸಾರ್ಥಕಗೊಳಿಸಿದ್ದಾರೆ. ವೀರಶೈವ ಒಂದು ಜಾತಿಯಲ್ಲ, ಅದು ಸಮಾಜವಾದ, ಅದೊಂದು ಸಮತಾವಾದದ ತತ್ವವೆಂದು ಎಂಟುನೂರು ವರ್ಷಗಳ ಹಿಂದೆ ಸಾರಿಹೋದ ಅಣ್ಣ ಬಸವಣ್ಣನವರ ಸಂದೇಶವನ್ನು ಆಧುನಿಕವಾಗಿ ಇಂದು ನಮ್ಮ ಕಣ್ಣ ಮುಂದೆ ಪ್ರದರ್ಶಿಸಿ ಆಚರಿಸಿ ತೋರಿಸಿದ್ದಾರೆ. ಶ್ರೀ ಸ್ವಾಮಿಗಳವರ ಸೇವಾ ಪ್ರಯೋಜನವನ್ನು ನಾಡಿನ ಜನತೆ ಪಡೆದು ಅನುಭವಿಸಿದ್ದಾರೆ. ಆ ಕೃತಜ್ಞತೆಯನ್ನು ಸಮರ್ಥಿಸಲು ನಾವಿಂದು ಸೇರಿದ್ದೇವೆ. ಮುಂತಾಗಿ ಶ್ರೀ ಶ್ರೀ ಗಳವರ ಸಮಾಜಸೇವೆ ಮತ್ತು ದಾಸೋಹವನ್ನು ಶ್ಲಾಘಿಸಿ, ಮೆಚ್ಚಿಗೆಯನ್ನು ವ್ಯಕ್ತಪಡಿಸುತ್ತಾ, ಈ ಮಹಾ ಸಭೆಯ ಉದ್ದಿಶ್ಯಗಳನ್ನು ಕಾರ್ಯ ರೂಪಕ್ಕೆತರಲು ತಮ್ಮಿಂದ ಸಾಧ್ಯವಾದಷ್ಟು ಸಹಾಯಮಾಡುವ ಆಶ್ವಾಸನೆಯನ್ನಿತ್ತು ಕಾರ್ಯನಿಮಿತ್ತ ಸಭೆಯಿಂದ ನಿರ್ಗಮಿಸಿದರು. ಅನಂತರ ಶ್ರೀ ಶ್ರೀ ಗೌರೀಶಂಕರಮಹಾಸ್ವಾಮಿಗಳವರು ಅಧ್ಯಕ್ಷತೆಯನ್ನು ವಹಿಸಿ ಸಭೆಯ ಕಾರ್ಯ ಕಲಾಪಗಳನ್ನು ಮುಂದುವರಿಸಿದರು.

ನಂತರ ಶಾಸಕರಾದ ಶ್ರೀ ಜೆ.ಎಚ್. ಪಟೇಲರು ಮಾತನಾಡುತ್ತಾ ಒಬ್ಬ ವಿಜ್ಞಾನಿಯು ತನ್ನ ಅಸಾಧಾರಣ ಪ್ರತಿಭೆಯಿಂದ ಕಂಡುಹಿಡಿದ ಸಂಶೋಧನೆಯು ಜಗತ್ತಿನ ಅಭಿವೃದ್ಧಿಗೆ ಸಾಧಕವಾಗುವಂತೆ, ಸಾಧಕರಾಗಿ, ಸಿದ್ಧರಾಗಿ ತಪಸ್ವಿಗಳಾಗಿ ಜಗತ್ತಿನ ಶಾಂತಿಗಾಗಿ ಆಧ್ಯಾತ್ಮಿಕ ಸಂಪತ್ತನ್ನು ಮೈಗೂಡಿಸಿಕೊಂಡ ಸಹಸ್ರಾರು ಮಕ್ಕಳನ್ನು ದೇಶಕ್ಕಾಗಿ ಅರ್ಪಿಸುವ ಶ್ರೀಗಳವರ ತಪಸ್ಸಿದ್ಧಿಯನ್ನು ವರ್ಣಿಸಲು ಅಶಕ್ಯವಾಗಿದೆ. ಇಂದು ರಾಷ್ಟ್ರಕ್ಕೆ ಬೇಕಾದ ರಾಷ್ಟ್ರೀಯ ಭಾವೈಕ್ಯಕ್ಕೆ ಸಾಧಕವಾಗಿದೆ ಶ್ರೀ ಕ್ಷೇತ್ರದಲ್ಲಿ ಕಾಣುವ ಸಹಬಾಳ್ವೆಯ ಜೀವನ ನಮ್ಮ ರಾಷ್ಟ್ರಕ್ಕೊಂದು ಚೈತನ್ಯ ಸ್ವರೂಪಿಯಾದುದೆಂದರು. ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಗಳೂ, ಶಾಸಕರೂ ಆದ ಶ್ರೀ ಎಸ್. ಚನ್ನಬಸವಯ್ಯನವರು ಮಾತನಾಡುತ್ತಾ ಶ್ರೀ ಶ್ರೀ ಗಳವರು 50 ವರ್ಷಗಳಿಂದ ಮಾಡುತ್ತಾ ಬಂದಿರುವ ಈ ವಿದ್ಯಾಪ್ರಸಾರದ ಕಾರ್ಯವನ್ನು

ನೋಡಿದರೆ ನಮ್ಮ ಪ್ರಾಚೀನ ಕಾಲದ ಪ್ರಸಿದ್ಧ ನಲಂದ ವಿಶ್ವವಿದ್ಯಾನಿಲಯವನ್ನು ನೆನಪಿಗೆ ತರುತ್ತದೆ. ಈ ಕೀರ್ತಿಯನ್ನು ಉಜ್ವಲ ಗೊಳಿಸಲು ವೈದ್ಯಕೀಯ ಕಾಲೇಜಿನ ಅಗತ್ಯತೆಯನ್ನು ಈ ಮಹೋತ್ಸವದ ಸವಿನೆನಪಿನ ಕಾಣಿಕೆಯಾಗಿ ಅರ್ಪಿಸಬೇಕೆಂದು ಭಾವಾವೇಶದಲ್ಲಿ ತುಂಬುಹೃದಯದಿಂದ ಸಭೆಯ ಮುಂದಿಟ್ಟರು. ಇದರಿಂದ ಜೀವನದ ಸಂತೃಪ್ತಿಯೇ ಇಹಪರ ಸೌಖ್ಯ, ಮಾನವನ ಬದುಕಿನ ಪರಿಪೂರ್ಣವೆನ್ನುವ ಶ್ರೀ ಶ್ರೀಗಳವರ ಸಂದೇಶಕ್ಕೆ ಸಾರ್ಥಕವಾಗುತ್ತದೆ ಎಂದರು. ನಂತರ ಶಾಸಕರಾದ ಶ್ರೀ ಹೆಚ್. ಗಂಗಾಧರ್ ರವರು, ಶ್ರೀ ಭೀಮಣ್ಣ ಖಂಡ್ರೇರವರು, ಶ್ರೀ ಭಗವಾನ್ ರವರೂ ಎಸ್. ಐ. ಟಿ. ಪ್ರಿನ್ಸಿಪಾಲರಾದ ಶ್ರೀ ಬಿ.ಎಸ್. ಕರಕರೆಡ್ಡಿಯವರೂ, ಶ್ರೀ ಸಾಗರನಹಳ್ಳಿ ರೇವಣ್ಣನವರೂ, ಶ್ರೀ ಟಿ.ಅನಂತರಾಮ ಶ್ರೇಷ್ಠಿಯವರು ಶ್ರೀ ಟಿ.ಎಸ್. ಕರಿಬಸವಯ್ಯನವರೂ, ಮೊದಲಾದ ಮಹನೀಯರು ಶ್ರೀಶ್ರೀ ಗಳವರು 50 ವರ್ಷಗಳಿಂದ ಅನೇಕ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸಿ, ಸಾವಿರಾರು ವಿದ್ಯಾರ್ಥಿಗಳಿಗೆ ಉಚಿತ ಅಶನ ವಸತಿಗಳನ್ನು ಒದಗಿಸಿ ಸರ್ವಸಮಾಜಕ್ಕೆ ಸಲ್ಲಿಸಿದ ನಿಸ್ವಾರ್ಥ ಸೇವೆಯನ್ನು ಕೊಂಡಾಡುತ್ತಾ ಅವರ ಸೇವೆಯ ಕುರುಹಾಗಿ ಸುವರ್ಣ ಮಹೋತ್ಸವವನ್ನು ನಡೆಸುವುದು ಸೂಕ್ತವಾಗಿದೆ. ಅದಕ್ಕಾಗಿ ಮಹಾಜನಗಳು ಮುಂದೆ ಬಂದು ಉದಾರವಾಗಿ ಧನ ಸಹಾಯವನ್ನು ಮಾಡಬೇಕೆಂದು ಕೋರಿದರು. ಈ ಕೋರಿಕೆ ಮೇರೆಗೆ ಹಲವು ಮಂದಿ ದಾನಿಗಳು ಸಭೆಯಲ್ಲಿಯೇ ಹಣವನ್ನು ಪಾವತಿಮಾಡಿದರು. ಕೆಲವರು ವಾಗ್ದಾನಮಾಡಿ ಪ್ರೋತ್ಸಾಹಿಸಿದರು.

ಈ ಮಹೋತ್ಸವ ಸಂದರ್ಭದಲ್ಲಿ ಅರ್ಪಿಸಲಿರುವ ಸಿದ್ಧಗಂಗಾ ಶ್ರೀ ಎಂಬ ಸಂಭಾವನಾ ಗ್ರಂಥದ ಸಂಪಾದಕ ಸಮಿತಿಯ ಅಧ್ಯಕ್ಷರಾದ ಶ್ರೀ ಸಿದ್ಧಯ್ಯ ಪುರಾಣಿಕ ರವರು ಮಾತನಾಡುತ್ತಾ ತ್ರಿವಿಧ ದಾಸೋಹಿಗಳೂ, ಮಹಾಮಹಿಮಾಶಾಲಿಗಳೂ, ಮಹಾ ತಪಸ್ವಿಗಳೂ ಹಾಗೂ ಮಹಾ ಪುಣ್ಯಶೀಲರಾದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಕಾರ್ಯವ್ಯಾಪ್ತಿಯನ್ನು ವರ್ಣಿಸಲಸದಳವಾದುದು. ನಾವುಗಳು ಇತಿಹಾಸ ಪುರಾಣಗಳನ್ನು ಓದಿದಾಗ ಬುದ್ಧ ಮೊದಲಾದ ಮಹಾಪುರುಷರ ವ್ಯಕ್ತಿತ್ವವನ್ನು ಓದಿ ತಿಳಿಯುತ್ತೇವೆ. ಅವರು ಹೇಗಿರಬಹುದೆಂದೆನಿಸಿದಾಗ ಗಾಂಧೀಜಿಯವರಂತ ಮಹಾವ್ಯಕ್ತಿಯನ್ನು ನೋಡಿ ಅವರು ಹೀಗಿದ್ದಿರಬಹುದೆಂದು ಊಹಿಸಿಕೊಳ್ಳುತ್ತೇವೆ. ಅಂತೆಯೇ ಹನ್ನೆರಡನೇ ಶತಮಾನದಲ್ಲಿದ್ದ ವೀರವೈರಾಗ್ಯ ಜ್ಞಾನಮೂರ್ತಿ ಅಲ್ಲಮಪ್ರಭುವನ್ನು ನಾವು ಕೇಳಿದ್ದೇವೆ. ‘ಅವರು ಹೇಗಿದ್ದಿರಬಹುದೆಂದರೆ ನಾವು ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರನ್ನು ನೋಡಿದಮೇಲೆ ಅಲ್ಲಮ ಪ್ರಭುಗಳು ಶ್ರೀ ಶ್ರೀ. ಶಿವಕುಮಾರ ಸ್ವಾಮಿಗಳಂತೆಯೇ ಇದ್ದಿರಬೇಕೆಂದು ಈಗ ನಮಗನಿಸುತ್ತದೆ. ಮಹಾಮೇರು ಸದೃಶವಾದ ವ್ಯಕ್ತಿತ್ವದಲ್ಲಿ ಯಾವುದನ್ನು ಮೆಚ್ಚುವುದು ಯಾವುದನ್ನು ಬಿಡುವುದು. ಜ್ಞಾನವೇ, ವೈರಾಗ್ಯವೇ, ವಿದ್ಯೆಯೇ, ಲೋಕವ್ಯವಹಾರ ಜ್ಞಾನವೇ, ಸಾಮಾಜಿಕ ಸೇವೆಯೇ, ವಿದ್ಯಾಪ್ರಸಾರ ಕಾರ್ಯವೇ. ಸರ್ವಸಮಾನತೆಯೇ ಸಕಲ ಜೀವಿಗಳಲ್ಲಿನ ಅನುಕಂಪವೇ, ಸಾಂಸ್ಕೃತಿಕ, ಸಾಹಿತ್ಯಕ, ನೈತಿಕ, ಧಾರ್ಮಿಕ ಆಧ್ಯಾತ್ಮಿಕ ಶಕ್ತಿಗಳ ಪ್ರತೀಕವೇ ಇವುಗಳಲ್ಲಿ ಯಾವುದನ್ನು ನೋಡಬೇಕು, ಯಾವುದನ್ನು ಬಿಡಬೇಕು. ಎಲ್ಲವೂ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ವಿನಿಯೋಗವಾತಕ್ಕವುಗಳು. ಅವರ ಬಹುಮುಖವಾದ ವ್ಯಕ್ತಿತ್ವ ಅನುಪಮ ಹಾಗೂ ಅನ್ಯಾದೃಶವಾದುದು. ಒಟ್ಟಿನಲ್ಲಿ ಹೇಳಬೇಕಾದರೆ ನಾವು ಐತಿಹಾಸಿಕವಾಗಿ, ತಾಜ್‌ಮಹಲ್ ಮೊದಲಾದ ಹಲವು ಅದ್ಭುತಗಳನ್ನು ಕೇಳಿದ್ದೇವೆ, ನೋಡಿದ್ದೇವೆ, ಕವಿ ವಾಲ್ಮೀಕಿ, ವ್ಯಾಸ, ಕಾಳಿದಾಸ ಮೊದಲಾದವರ ಸಾಹಿತ್ಯಕ ಅದ್ಭುತವನ್ನು ನೋಡಿದ್ದೇವೆ. ಭೂವ್ಯೋಮಾಕಾಶಗಳ ಸಂಬಂಧ ಕಲ್ಪನೆಯ ಇಂದಿನ ವೈಜ್ಞಾನಿಕ ಅದ್ಭುತಗಳನ್ನು ಕಂಡಿದ್ದೇವೆ. ಇನ್ನೂ ಆಧ್ಯಾತ್ಮಿಕ ಅದ್ಭುತವೆಂದರೆ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಎಂದರು. ಮುಂದುವರಿಸಿ ಸಿದ್ಧಗಂಗಾ ಶ್ರೀ ಗ್ರಂಥದ ವಿವರಣೆಯನ್ನು ಕೊಟ್ಟರು. ಸುವರ್ಣ ಮಹೋತ್ಸವ ಸಮಿತಿಯ ಗೌರವಾಧ್ಯಕ್ಷರನ್ನಾಗಿ ಶ್ರೀ ಕೆ. ತಿಪ್ಪೇರುದ್ರಯ್ಯನವರನ್ನು, ಕಾರ್ಯಾಧ್ಯಕ್ಷರನ್ನಾಗಿ ಶ್ರೀ ಕೆ. ಯಂ. ನಂಜಪ್ಪನವರನ್ನೂ ಮತ್ತು 10 ಮಂದಿ ಉಪಾಧ್ಯಕ್ಷರುಗಳನ್ನು ಸಭೆಯು ಸರ್ವಾನುಮತದಿಂದ ಚುನಾಯಿಸಿ ಅವರುಗಳು ದಕ್ಷರಾದ ಕಾರ್ಯ ನಿರ್ವಾಹಕ ಸದಸ್ಯರುಗಳನ್ನು ನೇಮಿಸಿಕೊಳ್ಳಬಹುದೆಂದು ತೀರ್ಮಾನಿಸಿತು. ಶ್ರೀ ಗೌರೀಶಂಕರ ಸ್ವಾಮಿಗಳವರು ಸಭೆಯನ್ನು ಆಶೀರ್ವದಿಸಿದರು. ಶ್ರೀ ಎಸ್. ಆರ್. ಜಗದೀಶ್‌ರವರು ಸಭೆಯನ್ನು ವಂದಿಸಿದರು. ಸಭೆಯು ಮಂಗಳದೊಂದಿಗೆ ಮುಕ್ತಾಯವಾಯಿತು.



( ಮುಂದುವರಿದ ಲೇಖನ )

# ಶ್ರೀ ಸಿದ್ಧಗಂಗಾ ಕ್ಷೇತ್ರ : ಪರಿಸರ ಮತ್ತು ಇತಿಹಾಸ

—ಚನ್ನಪ್ಪ ಎರೇಸೀಮೆ

## ತೋಂಟದ ಸಿದ್ಧಲಿಂಗೇಶ್ವರರು

ಶೂನ್ಯ ಸಿಂಹಾಸನಾಧೀಶ್ವರರ ಪರಂಪರೆಯಲ್ಲಿ ಪ್ರಭುದೇವ, ಚೆನ್ನಬಸವಣ್ಣ, ಸಿದ್ಧರಾಮೇಶ್ವರರು ನಂತರ ಅತ್ಯಂತ ಪ್ರಭಾವಶಾಲಿಗಳೂ, ಮಹಿಮಾಪುರುಷರೂ, ಶಿವಾನುಭವ ವಿದ್ಯಾವಿಶಾರದರೂ, ವಚನಶಾಸ್ತ್ರಕಾರರೂ ಎನಿಸಿದ ಶಿವಯೋಗಿಗಳೆನಿಸಿದ್ದಾರೆ. ಇವರು ಬಹುಶಃ ಕ್ರಿ.ಶ. ೧೪೦೦ರ ಸುಮಾರಿನಲ್ಲಿ ಜನಿಸಿ, ೧೪೮೦ರವರೆಗೆ ಬಾಳಿದರು. [11] ವೀರಶೈವ ಧರ್ಮೇತಿಹಾಸದಲ್ಲಿ ಅತ್ಯದ್ಭುತ ಕ್ರಾಂತಿಯನ್ನು ಮಾಡಿದ ಕಾರಣ ಪುರುಷರೆನಿಸಿದ್ದಾರೆ ; ಇವರನ್ನು ದ್ವಿತೀಯ ಪ್ರಭುದೇವರೆಂದೂ ಕರೆಯಲಾಗುತ್ತಿದೆ. ಇವರು ಮಾಡಿದ ಕ್ರಾಂತಿ ಅದ್ಭುತ ; ತತ್ಫಲವಾಗಿ ಧರ್ಮವು ನವನವೋನ್ಮೇಷಶಾಲಿನಿಯೆನಿಸಿದೆ. ಇಂದು ವೀರಶೈವ ಸಮಾಜದಲ್ಲಿ ತಲೆಯೆತ್ತಿನಿಂತಿರುವ ಅಧಿಕ ಸಂಖ್ಯಾತವಾದ ವಿರಕ್ತ ಮಠಗಳ ಪಟ್ಟದ ಮಠಗಳ, ಶರಣ ಸಂತತಿಯ ಮಠಗಳ ಅಸ್ತಿತ್ವಕ್ಕೆ ತೋಂಟದ ಸಿದ್ಧಲಿಂಗ ಶಿವಯೋಗಿಗಳೇ ಬಹುಮಟ್ಟಿಗೆ ಕಾರಣಪುರುಷರೆನಿಸಿದ್ದಾರೆ, ಸಿದ್ಧಗಂಗಾ ಮಠವು ಗೋಸಲ ಸಿದ್ಧೇಶ್ವರರಿಂದ ಸ್ಥಾಪನೆಗೊಂಡು ತನ್ನ ಮಹಿಮಾ ವಿಶೇಷಗಳನ್ನು ಬೆಳೆಸಿಕೊಂಡು ಬಂದರೂ ಈ ಕ್ಷೇತ್ರಾಧಿಪತಿಗಳು ಸಿದ್ಧಲಿಂಗೇಶ್ವರರೇ ಎನಿಸಿದ್ದಾರೆ ಇಂದು ಕ್ಷೇತ್ರದಲ್ಲಿ ನಡೆಯುವ ನಿತ್ಯೋತ್ಸವ, ಮಾಸೋತ್ಸವ, ವಾರ್ಷಿಕೋತ್ಸವ, ರಥೋತ್ಸವ ಯಾತ್ರಾದಿ ಕಾರ್ಯಕ್ರಮಗಳೆಲ್ಲ ಇವರ ಹೆಸರಿನಿಂದಲೇ ನಡೆಯುತ್ತಿವೆ. ಮಹಾಮಹಿಮರಾದ ಇವರು ತಮ್ಮ ಗುರುವರ್ಗದವರ ತಪೋತೇಜದಿಂದ ಈ ಕ್ಷೇತ್ರವು ಜಾಗೃತಸ್ಥಾನವೆನಿಸಿ ಅಪಾರ ಮಹಿಮೆಗಳ ಆಗರವೆನಿಸಿದೆ. ಲಕ್ಷೋಪಲಕ್ಷ ಜನಜೀವನದ ಮೇಲೆ ಪರಿಣಾಮ ಬೀರಿ ನಾನಾ ವಿಧವಾದ ಜೀವನ ಮಾರ್ಗಗಳನ್ನು ಕಲ್ಪಿಸಿದೆ : ಕಲ್ಪಿಸುತ್ತಿದೆ ದೀನದಲಿತವರ್ಗಕ್ಕೆ ಪ್ರಸಾದವಿತ್ತು ಪ್ರಸನ್ನತೆಯನ್ನೊದಗಿಸುತ್ತಿದೆ. ಜನತೆಯನ್ನು ಯಾವ ಭೇದಭಾವವಿಲ್ಲದೆ ಲೌಕಿಕ, ಪಾರಲೌಕಿಕ ವಿದ್ಯಾವೈದುಷ್ಯ ಸಂಪದ್ಭರಿತವನ್ನಾಗಿ ಮಾಡುತ್ತಿದೆ. ಕಿಂಬಹುನಾ—ಈ ಕ್ಷೇತ್ರವು ಸಕಲ ಜೀವಾತ್ಮರಿಗೆ ಲೇಸನೇ ಬಯಸುತ್ತದೆ. ಎಂಬ ಒಂದು ಮಾತಿನಿಂದ ಕ್ರೋಢೀಕರಿಸಿ ಹೇಳಿಮುಗಿಸಬಹುದು.

ಪ್ರಕೃತ ಈ ಕ್ಷೇತ್ರಾಧಿಪತಿಗಳಾದ ಶ್ರೀ ಸಿದ್ಧಲಿಂಗಶಿವಯೋಗಿಗಳ ವಿಷಯವಾಗಿ ಈ ಲೇಖನದಲ್ಲಿ ಸ್ವಲ್ಪ ಧೀರ್ಘವಾಗಿಯೇ ವಿವರಣೆ ಕೊಡಲಾಗಿದೆ.

ತೋಂಟದ ಸಿದ್ಧಲಿಂಗ ಶಿವಯೋಗೀಶ್ವರರನ್ನು ಪ್ರಭುದೇವರ ಶೂನ್ಯಸಿಂಹಾಸನಾಧಿ ಪತಿಗಳೆಂದೂ, ದ್ವಿತೀಯ ಪ್ರಭುದೇವರೆಂದೂ ಇವರ ಬಗೆಗೆ ಹುಟ್ಟಿದ ಅನೇಕ ಪುರಾಣಗಳಲ್ಲಿ ಮತ್ತು ಸ್ತೋತ್ರಮಾಡಿದ ಕವಿಗಳ ಕಾವ್ಯಗಳಲ್ಲಿ ಕೀರ್ತಿತರಾಗಿದ್ದಾರೆ. ಇವರ ಬಗೆಗೆ ಇದುವರೆಗೆ ಎರಡು ಶಿಲಾಶಾಸನಗಳು ಉಪಲಬ್ಧವಿದ್ದು,

---

11. ಇಂದಿಗೂ ಈ ಮಠದಲ್ಲಿ ಚೆನ್ನಬಸವೇಶ್ವರ ಸ್ವಾಮಿಗಳವರ ಉತ್ಸವ ಮೂರ್ತಿಯು ಇದ್ದು ಪ್ರತಿವರ್ಷ ಉತ್ಸವಾದಿಗಳು ಜರುಗುತ್ತವೆ.

ಇತ್ತೀಚೆಗೆ ತೋಂಟದ ಸಿದ್ಧಲಿಂಗೇಶ್ವರರ ಕಾಲದ ಬಗೆಗೆ ಅನೇಕ ಚರ್ಚೆಗಳು ನಡೆಯುತ್ತವೆ. ೧೫೦೦ ರಿಂದ ಕ್ರಿ. ಶ. ೧೫೮೪ ರವರೆಗೆ ಇವರ ಕಾಲ ತೂಗುಯ್ಯಾಲೆಯಲ್ಲಿದೆ. ಪ್ರಕೃತ ಕವಿಚರಿತ್ರೆಕಾರರ ಅಭಿಪ್ರಾಯವನ್ನು ಇದುವರೆಗೆ ನಂಬಿಕೊಂಡು ಬಂದಿರುವ ನಂಬಿಗೆಯನ್ನು ಮುಖ್ಯವಾಗಿಟ್ಟುಕೊಂಡು ಸದ್ಯಕ್ಕೆ ಅದೇಕಾಲವನ್ನು ಸ್ವೀಕರಿಸಲಾಗಿದೆ. ಇತ್ತೀಚಿನ ವಿದ್ವಾಂಸರ ಕ್ರಿ.ಶ. ೧೫೮೪ ರ ವರೆಗೆ ಅವರ ಕಾಲವನ್ನು ಎಳೆದೊಯ್ಯುವ ವಾದವನ್ನು ಅಲ್ಲಗಳೆಯುವವರಿದ್ದಾರೆ. ಡಾ॥ ಮಲ್ಲೇದೇವರು ಸಂಪಾದಿಸಿರುವ ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು ಗ್ರಂಥದ ಪೀಠಿಕೆ ಪುಟ-೧೯ ರಿಂದ ೭೭ ರವರೆಗಿನ.

ವಿಷಯ ನೋಡಿರಿ (ಪ್ರ. ಮು. 1975 ಕ. ವಿ. ವಿ)

ಆ ಶಾಸನಗಳು ಈ ಮಹಾಶಿವಯೋಗಿಯ ನಾಮ ಸ್ಮರಣೆಮಾಡಿ ಪುನೀತಗೊಂಡಿವೆಯೆನ್ನಬಹುದು. ಮೊದಲನೆಯ ಶಾಸನವೇ ಎಡೆಯೂರಿನ ದೇವಾಲಯದಲ್ಲಿರುವ ಶಾಸನ ಇದರಲ್ಲಿ ಶಿವಯೋಗಿಗಳನ್ನು ವಿಶೇಷವಾಗಿ ವರ್ಣನೆ ಮಾಡಲಾಗಿದೆ. ಎರಡನೆಯ ಶಾಸನ ಚಿತ್ರದುರ್ಗದ ಶ್ರೀನಿವಾಸ ಅವಧಾನಿಗಳ ತೋಂಟದಲ್ಲಿ ಇದೆ. ಅದರಲ್ಲಿ ಶಿವಯೋಗಿಗಳು ಬರೆದ ಷಟಸ್ಥಲ ಜ್ಞಾನಮೃತ ಸಾರದ ೩೭೨ ನೆಯ ವಚನದ ಪೂರ್ಣ ಪಾಠವೇ ಇದೆ. ಈ ಎರಡೂ ಶಿಲಾಶಾಸನಗಳನ್ನೂ ಅವಲೋಕಿಸಿದಾಗ[12] ಆ ಕಾಲದಲ್ಲಿ ಶಿವಯೋಗಿಗಳ ಪ್ರಭಾವ ಮುದ್ರೆ ಎಂತಹುದೆಂಬುದರ ಅರಿವಾಗದಿರದು. ಚಿತ್ರದುರ್ಗದ ಶಾಸನವನ್ನು ಯಂತ್ರದ ಕಲ್ಲೆಂದು ಕರೆಯಲಾಗುತ್ತಿದೆ. ಜನರು ದನಕರುಗಳಿಗೆ ಬೇನೆ ಬಂದಾಗ ಇದನ್ನು ತೊಳೆದ ನೀರನ್ನು ಅವುಗಳಿಗೆ ಕುಡಿಸುತ್ತಾರೆ. ರೋಗ ಗುಣವಾಗುತ್ತದೆ, ಎಂಬ ಭಾವನೆ ಆ ಜನರಲ್ಲಿದೆ. ಇದೊಂದು ಯಂತ್ರದ ಕಲ್ಲಾಗಿರುವುದು ನಿಜವೆಂದು ತೋರುತ್ತದೆ. ಏಕೆಂದರೆ ಈ ವಚನದ ಮೇಲ್ಭಾಗದಲ್ಲಿ ಷಡಕ್ಷರ ಮಂತ್ರದ ಕುಂಡಲಿಯು ಉದ್ಧೃತವಾಗಿದೆ. ದತ್ತಿ ಮೊದಲಾದ ಈ ಶಾಸನದಲ್ಲಿ ಇಲ್ಲದ ಕಾರಣ ಇದನ್ನು ಕೇವಲ ಈ ಮಂತ್ರದ ಮಹಿಮೆಯನ್ನು ಬಿತ್ತರಿಸುವುದಕ್ಕಾಗಿಯೇ ಕೆತ್ತಿದಂತೆ ತೋರುತ್ತದೆ.'[13]

ತೋಂಟದ ಸಿದ್ಧಲಿಂಗೇಶ್ವರರು ಪ್ರಭುದೇವರಿಂದ ಶೂನ್ಯಸಿಂಹಾಸನಾಧೀಶರ ಪರಂಪರೆಯಲ್ಲಿ ೧೬ ನೆಯವರು ; ಅಥವಾ ತಾವೇ ತಮ್ಮ ೮ ನೇ ವಚನದಲ್ಲಿ ಹೇಳಿಕೊಂಡ ಹಾಗೆ ತಮ್ಮ ಗುರುಪರಂಪರೆಯಲ್ಲಿ ೧೬ ನೆಯವರು ಇವರ ಜೀವನ ಚರಿತ್ರೆಯನ್ನರಿಯಲು ವಿಪುಲವಾದ ಸಾಹಿತ್ಯರಾಶಿ ಕನ್ನಡದಲ್ಲಿದೆ. ಇವರ ಜೀವನ ಅಧಿಕರಿಸಿ ; ಸ್ವತಃ ಇವರ ಶಿಷ್ಯಪರಂಪರೆಯಲ್ಲೊಬ್ಬರಾದ ವಿರಕ್ತ ತೋಂಟದಾರ್ಯ (ಕಿ. ಶ. ೧೫೬೦) ರು 'ಸಿದ್ದೇಶ್ವರ ಪುರಾಣ' ವೆಂಬ ಹೆಸರಿನ ಪುರಾಣ ಬರೆದಿದ್ದಾರೆ ಹೇರಂಬನೆಂಬ ಬ್ರಾಹ್ಮಣಕವಿ (ಕಿ. ಶ. ೧೫೬೦)[14] ಯು ಸಿದ್ಧಲಿಂಗೇಶ್ವರ ಸಾಂಗತ್ಯವನ್ನು ಬರೆದಿದ್ದಾನೆ. ಶಾಂತೇಶನೆಂಬ ಕವಿ (ಕಿ. ಶ. ೧೬೭೦)[15] ಯು ಸಿದ್ಧೇಶ್ವರ ಪುರಾಣವನ್ನು ಬರೆದಿದ್ದಾನೆ. ಇದೂ ಅಲ್ಲದೆ ಘನಲಿಂಗ ದೇವ (ಕ್ರಿ. ಶ. ೧೬೭೦) ಮೊದಲ್ಗೊಂಡು ೧೮ನೆ ಶತಮಾನದವರೆಗಿನ ಸುಮಾರು ನಾಲ್ವತ್ತು ಜನ ಗಳು ತಮ್ಮ ಕಾವ್ಯಗಳಲ್ಲಿ ಸಿದ್ಧಲಿಂಗೇಶ್ವರರ ಮಹಿಮಾತಿಶಯವನ್ನು ಭಯಭಕ್ತಿಯಿಂದ ಕೊಂಡಾಡಿದ್ದಾರೆ.[16] ಷಡಕ್ಷರ ದೇವನಂಥ ಅದ್ಭುತ ಪ್ರತಿಭಾ ಪಾಂಡಿತ್ಯವುಳ್ಳ ಕವಿಯು ತನ್ನ ಗ್ರಂಥಗಳಲ್ಲಿ ಸಿದ್ಧಲಿಂಗೇಶ್ವರರ ವ್ಯಕ್ತಿತ್ವವನ್ನು ಭಯಭಕ್ತಿಯಿಂದ ಕೊಂಡಾಡಿದಲ್ಲದೆ, ಪ್ರತ್ಯೇಕವಾಗಿ 'ಸಿದ್ಧಲಿಂಗ ಸ್ತವ' ಎಂಬ ಸ್ತೋತ್ರ ಗೀತೆಗಳನ್ನು ಸಂಸ್ಕೃತದಲ್ಲಿ ಹಾಡಿದ್ದಾನೆ. ಇವಲ್ಲದೆ ನಿರಂಜನ ವಂಶರತ್ನಾಕರ, ನಿರಂಜನವಂಶದರ್ಪಣ ಮೊದಲಾದ ಗ್ರಂಥಗಳಲ್ಲಿ ಸಿದ್ಧಲಿಂಗೇಶ್ವರರ ಅನೇಕ ಮಹಿಮೆಗಳ ವರ್ಣನೆಯಿದೆ.

( ಮುಂದುವರಿದುದು )

---

೧ನೆಯ ಶಾಸನ ಎಡೆಯೂರ ದೇವಾಲಯದಲ್ಲಿರುವುದು (ಇಲ್ಲಿಯ ಅಂಕಿಗಳು ಸಾಲುಗಳನ್ನು ಸೂಚಿಸುವುವು) (೧) ಕೊಡಗಿ ಹಳ್ಳಿಯ ದೇವರು ತಾಲುಪಡದ ಭೂಮಿಯಲ್ಲಿ ತೋಂಟದ ಸ್ವಾಮಿಗೆ (2) ತಮ್ಮ ಭಕ್ತಿಯಿಂದಾ ಕಟ್ಟಿಸಿ ಕೊಟ್ಟಮಠಯಿಮಹ ಸಿದ್ಧೇಶ್ವರನ ಮತೆಂದು 3) ದೆ ಶ್ರೀಮತು ಸಚ್ಚಿದಾನಂದ ನಿತ್ಯ ಪರಿಪೂರ್ಣವನುಳ್ಳ ಅನಾದಿಭಕ್ತ ಆ ಭಕ್ತನ ಹೃದಯದಲ್ಲಿ ಜಂ. (4) ಗಮಜಂಗಮರ ಮಕುಟದಲ್ಲಿ ಶೂನ್ಯ ಲಿಂಗ ಆ ಲಿಂಗದಲ್ಲಿ ಚಿದಂಬರ ಶಿವಶಕ್ತಿ ಪಂಚಶಕ್ತಿ ಪಂಚನಾದ ಪಂಚಬ್ರಂಹ್ಮಯೊಶ್ವರಾಷ್ಟಕ ಮಹೇಶ್ವರ ಪಂಚವಿಶೇತಿ ರುದ್ರರೇಕಾ. (6) ದಶಪ್ರಯವಯ....ರಣ್ಯ ಗರ್ಭ ವಿರಾಟ ತ್ರಿಮೂರ್ತಿ ಯಂತೀಯೆಂಭತೊಂದು ಮೂರ್ತಿ (7) ಯೆ ಅಂಗವಾಗಿ ಪಾರ್ತನೆ ಅನಾಧಿಭಕ್ತನು, ಆ ಭಕ್ತನ ಪ್ರಾಣ ಕಲಾ ಚೈತನ್ಯಸ್ವ (8) ರೂಪೇ ತೋಂಟದ ಸಿದ್ಧಲಿಂಗೇಶ್ವರನ ಮೂರ್ತಿ ಕ್ರಮ ಮೆತೆಂದದೆ (9) ದೆ ಪ್ರಣಮವ ಸಿರುಸು ನಮಸಾರಾವೆ ಭುಜ ಶಿಕುರವೇ ದೇಹ ವಯುಷ್ಕಾರ ವೇಪಾದ ಅನಂ. (10) ತ ಕೋಟಿ ಬ್ರಂಹ್ಮಾಂಡಗಳೇ ಮಕುಟ ಸಮಸ್ತ ಲೋಕಾದಿ ಲೋಕಂಗಳೇ ದೇಹದ ಜಳವ (11) ಳಯ ಆಕಾಶವೇ ಮುಖದಿಕ್ಕುಗಳೇ ವೇದ ಪುರಾಣಂಗಳೇ (13) ಕ್ಷತ್ರಂಗಳೇ ಪುಷ್ಪಚಂದ್ರ ಪ್ರಕಾಶವೇ ವಿಭೂತಿ ಅಷ್ಟಕಾಲ ಪರ್ವತಂಗಳೇ ರುದ್ರಾಕ್ಷಿ ಸಮಸ ಸಮುದ್ರಂಗ ತ್ರಿನ ಕಮಂಡಲ ಭುವನ ಸೃಷ್ಟಿಯ ಕಂತೆ ದಿವಾರಾತ್ರಿಗಳೇ ಮಠ ಷಡುರುತುಗಳೇ ಷಡುಸ್ಥಲ ಮಹಾಸೇ (14) ಳೇ ಪರಿಪೂರ್ಣಜ್ಞಾನವೇ ಪಂಚಮುದ್ರೆ ತ್ರಿಕಾಲಜ್ಞಾನವೇ ಮಹದೈಶ್ವರ್ಯ ಮಹಾ (15) ಷನೆಕಟಿ ಸೂತ್ರ ಕುಲವೇ ಶಿವಕುಲಯಿಂತಪ್ಪ ಅನಾದಿ ಜಂಗಮವೆ (16) ಮೇರುವೇ ದಂಡ ಸದ್ಗುಣವೇ ಕರ್ಪೂರ ಪುನ ಸರ್ವಾಂಗಲಿಂಗಿ (17) ಜಗ ಹಿತಾರ್ಥವಾಗಿ ಚರಿಸಿದ ಕ್ರಮವೆಂತೆಂದರೆ ಜ್ಞಾನಕ್ರಿಯಾ ಸ್ವರೂ (18) ಷಟಸ್ಥಲ ಜ್ಞಾನಿ ಸರ್ವಾಚಾರ ಸಂಪನ್ನ ಪಾದೋದಕ ಪ್ರಸಾದ ಪ್ರತಿಷ್ಠಾ ಚಾರ್ಯರು (19) ಅಷ್ಟಾವರಣಾಲಂಕರಣ ದ್ವೈತಾದ್ವೈತತಿಖಿತಮಾರ್ತಂಡನುಂಯಿಂತಪ್ಪ ದಿವ್ಯ ಶಿವಯೋಗಿ ಸಿದ್ಧಲಿಂಗೇಶ್ವರಂಗೆ (20) ಸಂವ್ಯಜ್ಞಾನೋದಯವಾಗಿ ಸಂಹಾರಹೇಯಂ ಮಾಡಿ ಶರಣು ಹೊಕ್ಕ ನಿತ್ಯಜನ ........

ಸಂ. ॥ ಪ್ರೊ. ಆರ್. ಸಿ. ಹಿರೇಮಠ; ಷ. ಜ್ಞಾ. ಸಾ. ಪೀಠಿಕೆ. —ಪು ೨೧೯—೨೪೧.

೨ ನೇಯ ಶಾಸನ-ನಾದ ಬಿಂದು ಕಳಾಭೇದವ ತಿಳಿವಲ್ಲಿ। ಅಕ್ಷರವಾದ ತೆರೆವನರಿಯ ಬಾ। ರದು ಅರಕ್ಷರಕೆ ಮೂಲ ಪ್ರಣಮನ ತಿಳಿದಲ್ಲದೆ ನಾದ ಕಳೆತೋರದು ಆ ನಾದದೊಳಗಿನ ಕಳೆಯ ನೋಡಿ ಕಂಡಲ್ಲದೆ ರಾಜ ಶಿವಯೋ। ಗಿ ಯಾಗ ಬಾರದು ರಾಜ ಶಿವಯೋಗ ವೆಂಬುದು। ಅದಿಯಲಿ ಶಿವಲ್ಲೀಜವಾದ ಮಹಾ ಮಹಿ। ಮರಿಗೆ ಸಾಧ್ಯವಪ್ಪುದಲ್ಲದೆ ತ್ರೈಜಗದಲ್ಲಾರಿ। ಗೂ ಅಸಾಧ್ಯನೋಡಾ ಮಹಲಿಂಗ ಗುರು ಸಿದ್ಧೇಶ್ವರ ಪ್ರಭುವೇ. ಅದೇ ಪು. ೨೩೧ ೨೩೨.

13. ಅದೇ ಪು. ೨೩೨.



14. ಹೇರಂಬ ಕವಿಯು ಕ್ರಿ. ಶ. ೧೫೭೦ ರಲ್ಲಿದ್ದನೆಂದು ಷ. ಜ್ಞಾ. ಸಾ.ದ ಪೀಠಿಕೆ] ಪು 51 ರಲ್ಲಿ ಹೇಳಿದ್ದಾರೆ. ಇವರು ವಿರಕ್ತ ತೋಂಟದಾರ್ಯರ ಸಮಕಾಲಿನರೇ ಆಗುತ್ತಾರೆ. ಇವನು ಯಲಹಂಕದ ನಾಳ್ಪ್ರಭು ಮುಮ್ಮಡಿ ಕೃಷ್ಣ ರಾಜನೆಂಬುವವನಿಗೆ ಶ್ರೀ ಸಿದ್ಧಲಿಂಗೇಶ್ವರ ಸಾಂಗತ್ಯವನ್ನು ಬರೆದಂತೆ ಹೇಳಿಕೊಂಡಿದ್ದಾನೆ, ಆದರೆ ಸಾಕಷ್ಟು ಆಧಾರಗಳಿಲ್ಲದ್ದರಿಂದ ಈ ಮಾತನ್ನು ಒಪ್ಪಲಾಗುವುದಿಲ್ಲ. ಇತ್ತೀಚೆಗೆ ಹೇರಂಬನ ಕಾಲವನ್ನು ೧೬೦೦ರಿಂದ ಮುಂದೆ ಎಂದು ವಿದ್ವಾಂಸರು ಕಾರಣ ಕೊಟ್ಟು ವಿವರಿಸುತ್ತಿದ್ದಾರೆ.

15. ಈ ಸಿದ್ದೇಶ್ವರ ಕವಿಯು ವೀರಶೈವಾಮೃತ ಮಹಾಪುರಾಣವನ್ನು ಬರೆದು ಗುಬ್ಬಿಯ (ಅಮರಗೊಂಡ) ಮಲ್ಲಣಾರ್ಯನ ಮಗ. ಇವರದು ವಿಶ್ವತ್ಪರಂಪರೆಯ ಶರಣ ಸಂಪ್ರದಾಯದ ಮನೆತನ ತೋಂಟದ ಸಿದ್ದೇಶ್ವರ ಪುರಾಣ ಇತ್ತೀಚೆಗೆ ಪ್ರಕಟವಾಗಿದೆ.

ಘನಲಿಂಗದೇವ (೧೪೭೦) ಗುಬ್ಬಿಯ ಮಲ್ಲಣ್ಣ (೧೪೭೫), ಸ್ವತಂತ್ರ ಸಿದ್ಧಲಿಂಗೇಶ್ವರರ (೧೪೮೦) ಗೊಮ್ಮಳಾಪುರದ ಸಿದ್ಧಲಿಂಗೇಶ್ವರ (೧೪೮೦) ಗೂಳೂರು ಸಿದ್ಧವೀರಣಾರ್ಯ (೧೪೮೦) ಸಾನಂದಶಿವಯೋಗಿ (೧೪೮೦) ಮಲ್ಲಿಕಾರ್ಜುನ ಕವಿ (೧೪೮೫) ಬಸವಲಿಂಗ ಶಿವಯೋಗಿ (೧೫೦೦), ಗುರುನಂಜಕವಿ (೧೫೦೪) ಗುಬ್ಬಿಯ ಮಲ್ಲಣಾರ್ಯ (೧೫೧೩) ಪ್ರಭುಲಿಂಗಕವಿ (೧೫೨೦), ಓದುವ ಗಿರಿಯ (೧೫೨೫), ಚೇರಮಾಂಕ (೧೫೨೬) ಮುರಿಗೆಯಶಾಂತವೀರ (೧೫೩೦) ಸಂಪಾದನೆಯ ಚನ್ನಂಜೆದೇವ (೧೫೩೦) ಇಮ್ಮಡಿತೋಂಟದಾರ್ಯ (೧೫೩೦) ಎಮ್ಮೆಯ ಬಸವ (೧೫೪೩) ಚನ್ನಬಸವಾಂಕ [೧೫೧೫] ಕುಮಾರ ಚೆನ್ನಬಸವ [೧೫೫೦] ಸಿರಿನಾಮಧೇಯ (೧೫೫೦), ಮುರಿಗೆ ದೇಶಿಕೇಂದ್ರ [೧೫೬೦] ಮಹಂತಸ್ವಾಮಿ [೧೫೬೦ [ಎಳಮಲೆಯಗುರು ಶಾಂತದೇವ [೧೫೬೫], ವಿರೂಪಾಕ್ಷ ಪಂಡಿತ [೧೫೮೫], ಇಮ್ಮಡಿಗೆಯ ಮುರಿಗೆ ಸ್ವಾಮಿ [೧೫೭೦] ಬಸವಲಿಂಗ ಕವಿ [೧೬೦೦] ಸಿದ್ಧಲಿಂಗ ಶಿವಯೋಗಿ [೧೬೦೦] ಸಂಪಾದನೆಯವೀರಣಾರ್ಯ [೧೬೦೦] ಎಳಂದೂರು ಹರೀಶ್ವರ [೧೬೦೭], ಬಸವಲಿಂಗ [೧೬೧೧], ಶಾಂತವೀರದೇಶಿಕ [೧೬೫೦] ಸಿದ್ಧನಂಜೇಶ [೧೬೫೦], ಪರ್ವತಶಿವಯೋಗಿ [೧೬೫೦]. ಷಡಕ್ಷರಕವಿ [೧೬೫೪] ಬಸವಲಿಂಗ (೧೬೭೯), ಸಂಪಾದನೆಯ ಪರ್ವದೇಶ [೧೬೯೮], ಸೋಮಶೇಖರ ಶಿವಯೋಗಿ [೧೭೦೦], ಸೋಮಕವಿ [೧೭೦೦], ನೂರೊಂದ [೧೭೪೦], ನಂದಿನಾಥ [೧೭೪೫] - ಇತ್ಯಾದಿ.

-ಸಂ. ಆರ್. ಸಿ. ಹಿರೇಮಠ; ಷ. ಜ್ಞಾ. ಸಾ. ಪೀಠಿಕೆ ಪು ೨೩೨ - ೩೩.

# ನಮಗೆ ತೃಪ್ತಿ ಬೇಕು

—ಷ. ರಾಮಕೃಷ್ಣ ಶಾಸ್ತ್ರಿ

'ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ' ಎಂದು ಭಗವತ್ಪಾದ ಶಂಕರಾಚಾರ್ಯರು ಸಾರಿದ್ದಾರೆ. ಅಂದರೆ ಕೆಟ್ಟ ಮಕ್ಕಳು ಇರಲೂ ಬಹುದು - ಆದರೆ ಕೆಟ್ಟತಾಯಿ ಇರಲಾರಳು. 'ಮಗು ಆಡಿ ಆಡಿ ಸೋತಾಗ ತಾಯಿ ತನ್ನ ತೊಡೆಯ ಆಶ್ರಯ ನೀಡಿ ವಿಶ್ರಾಂತಿ ಹೊಂದುತ್ತಾಳೆ' ಎಂದರು ರಾಮಕೃಷ್ಣ ಪರಮಹಂಸರು. ಅಂಥ ಆದಿಶಕ್ತಿಯಾದ ಭವಾನಿಯನ್ನು ಹಲವು ವಿದ್ವಾಂಸರು, ಆಚಾರ್ಯರುಗಳು ಹಲವಾರು ಸ್ತೋತ್ರದಿಂದ ಹಾಡಿ ಹೊಗಳಿದ್ದಾರೆ, ಹಾಡಿ ಹಾಡಿ ಕುಣಿದಿದ್ದಾರೆ. ಆ ಮಾತೆಯ ದಿವ್ಯ ಚರಣಾರವಿಂದಕ್ಕೆ ತಮ್ಮ ನುಡಿ ಪುಷ್ಪವನ್ನರ್ಪಿಸಿ ಸಂತಸಪಟ್ಟಿದ್ದಾರೆ; ತೃಪ್ತಿ ಹೊಂದಿದ್ದಾರೆ.

ತೃಪ್ತಿ–ಮನುಷ್ಯನಿಗೆ ಯಾವಾಗಲೂ ಬೇಕಾದುದೇ. ಪಾಲಿಗೆ ಬಂದುದು ಪಂಚಾಮೃತವೆಂದೇ ನೆನೆದು ಅದನ್ನು ಅನುಭವಿಸುವುದು ಸರಿ. ತನಗೆ ಹಾಳು ಬಂತೆಂದು ಕುಗ್ಗುವುದಾಗಲಿ, ಒಳ್ಳೆಯದು ಸಿಕ್ಕಿತು ಎಂದು ಹಿಗ್ಗುವುದಾಗಲೀ ಜ್ಞಾನದ ಚೌಕಟ್ಟಿಗೆ ಸೇರುವುದಿಲ್ಲ. 'ನಾನು' ಹೋದರೆ ಸ್ವರ್ಗಕ್ಕೆ ಹೋಗಬಹುದಲ್ಲವೇ!

ಇಂಥ ತಪ್ಪು ನಮ್ಮಿಂದ ಬರುವುದಿಲ್ಲವೆಂದಲ್ಲ; ಬರುತ್ತದೆ. ಹಾಳು–ಒಳಿತು, ಅಳು ನಗುವಿನಂತೆಯೇ ಜೀವನದ ದುರ್ಬಲತೆ. ಇಂಥ ದುರ್ಬಲತೆ ಇಲ್ಲದಿದ್ದರೆ ಎಲ್ಲರೂ ಯೋಗಿಗಳೊ ಪರಮಹಂಸರೊ ಆದಾರು. ಸರಿ, ಆದರೆ ಒಳಿತಿಗೆಲ್ಲ ತಾನು, ಕೆಡುಕಿಗೆಲ್ಲ ದೇವರು ಕಾರಣನೆಂದು ಬಗೆಯುತ್ತೇವೆ. ಒಳಿತೂ ಕೆಡುಕೂ ಆ ಮಹಾತಾಯಿಯ ಆಶೀರ್ವಾದ ಒಳಿತೂ ಅವಳೇ ಅವರವರ ಕರ್ಮಾನುಸಾರದಿಂದ ಅವರವರಿಗೆ ಆಯಾಯ ಫಲಗಳು ಸಿಗುತ್ತವೆ ಎಂದು ಸಮಾಧಾನಪಟ್ಟುಕೊಂಡರಾಯಿತು.

ಆದರೆ ಇನ್ನೊಂದು ಸಂಶಯ ಬಾಧಿಸುತ್ತದೆ ಅಲ್ಲವೆ? ತಪ್ಪು ಇಂಥದು; ಅದರಿಂದಾಗಿ ನಿನಗೆ ಈ ಶಿಕ್ಷೆ ವಿಧಿಸಿದ್ದೇನೆ ಎಂದು ಆ ಮಹಾತಾಯಿ ಹೇಳಬೇಕಿತ್ತೆಂದು ತೋರುತ್ತದೆ. ತಪ್ಪು-ಒಪ್ಪು ಎಂಬುದನ್ನೆಲ್ಲ ಮನುಷ್ಯ ಹೇಗೆ ತಿಳಿಯುವನೊ ಹಾಗೇ ಒಳಿತು ಕೆಡುಕನ್ನೂ ಅವನೇ ವಿಂಗಡಿಸಿಕೊಂಡಿದ್ದಾನೆ. ಜಗಜ್ಜನನಿಗೆ ಆ ಒಳಿತು ಕೆಡುಕಿನ ಭೇದವಿಲ್ಲ. ತಾಯಿಗೆ ತನ್ನ ಹೆಳವ, ಕುಂಟ, ಕುರುಡು ಮಕ್ಕಳಲ್ಲಿ ಹೇಗೆ ಭೇಧವಿಲ್ಲವೋ ಅದೇ ರೀತಿ ಆಕೆಗೆ ಆಕೆ ಹಿರಿಯಳು. ಲೋಕ ಲೋಕವನ್ನೇ ನೋಡುವವಳು ಅವಳ ದೃಷ್ಟಿ ವೈಶಾಲ್ಯತೆ ಒಂದು ಕುಟುಂಬವನ್ನಾಗಲಿ, ಒಬ್ಬ(ಳ) ನನ್ನೆ ಆಗಲಿ ನೋಡುವಂತಿಲ್ಲ; ನೋಡುವುದಿಲ್ಲ. ಎಲ್ಲವನ್ನೂ ಎಲ್ಲರನ್ನೂ ನೋಡುತ್ತಿದ್ದಾಳೆ. ಈ ದೃಷ್ಟಿ ಎಲ್ಲವೂ ತನ್ನ ಸುಖಕ್ಕಾಗಿಎಂದು ನೆನೆಸಿ, ಬೇಕಾದ-ಬೇಡಾದ ಕರಾಮತ್ತು ಮಾಡುತ್ತಿದ್ದಾನೆ ಮನುಷ್ಯ. ಕೊಲ್ಲುವ, ಕಾಯುವ ಎರಡೂ ಶಕ್ತಿಗಳು ಆ ಮಹಾ ತಾಯಿಯಲ್ಲಿ ಅಡಕವಾಗಿವೆ. ಅದನ್ನು ತಿಳಿಯದೆ ಮನುಷ್ಯ ಖಲ್ಲವೂ ತನ್ನಿಂದಾಗಿ ಎಂಬ ಅಹಂಕಾರ ಪಟುಕೊಂಡು ಅಣು ಅಸ್ತ್ರದಂಥ ಭೀಕರ ವಿಷವನ್ನು 'ಜಗತ್ತಿಗೆ ಹರಡಿ, ಪ್ರಕೃತಿಯ ಹುಟ್ಟನ್ನೇ ಕಬಳಿಸಿಯೇನು ಎಂದು ಮೆರೆಯುತ್ತಾನೆ.

ಇಂದು ಅಧ್ಯಾತ್ಮ-ವಿಜ್ಞಾನಗಳು ಸೆಳೆದಾಡುತ್ತಿವೆ. ಅಧ್ಯಾತ್ಮ ದೂರಾಗಲು ಮಾನವ ಹೆಣಗಾಡುತ್ತಿದ್ದಾನೆ. ಆದರೆ ಅಧ್ಯಾತ್ಮಕ್ಕೆಂದಿಗೂ ಸೋಲಿಲ್ಲ. ಯಾವ ವಿಜ್ಞಾನವೂ ಕೊಡದ ಶಾಂತಿ, ತೃಪ್ತಿ ಅಧ್ಯಾತ್ಮ ಕೊಡುತ್ತದೆ. ಅಧ್ಯಾತ್ಮದ ದಾರಿಯಲ್ಲಿ ನಡೆಯುತ್ತ ಹೋದರೆ ಇಂದು ಮನುಷ್ಯನಿಗುಂಟಾಗುವ ಅತೃಪ್ತಿ; ಅಶಾಂತತೆ ಕಡಿಮೆಯಾಗುತ್ತದೆ; ತೃಪ್ತಿ ಉಂಟಾಗುತ್ತದೆ. ಪೂರ್ಣಮಿದನಾದ ಯಜ್ಞಪುರುಷನೇ ತನಗೆ ಆಧಾರವೆಂಬ ಏಕೋಧ್ಯಾನದಲ್ಲಿದ್ದರೆ ಆ ದೈವ ಎಂದಿಗೂ ಯಾವ ಘಳಿಗೆಯಲ್ಲೂ ಕೈ ಕೊಡಲಾರದು. ಕೊಟ್ಟಿಲ್ಲ ಆದರೂ ಆ ಸಾಧನೆಗೆ ತಾಳ್ಮೆ ಬೇಕು. ಮನುಷ್ಯನ ತಾಳ್ಮೆಯ ಪರೀಕ್ಷೆಯೇ ದೇವರ ಆಟ. ಅನ್ಯಥಾ ಶರಣಂ ನಾಸ್ತಿ ಎಂದಾಗ ಕಾಯುವ ಕೈ ಅಭಯ ಹಸ್ತವೆತ್ತಿ ಬರುತ್ತದೆ. ಯಾವ ವಿಷಚಕ್ರದಿಂದಲೂ ಪಾರುಗೊಳಿಸುತ್ತದೆ.



ಪೂರ್ಣಚಕ್ರನಾದ ದೇವರೇ ನಮಗಂಥ ತಾಳ್ಮೆ, ತೃಪ್ತಿಗಳನ್ನು ಕೊಡಬೇಕು. ಜಗತ್ತು ಶಾಂತಿಯಿಂದ, ಮನುಷ್ಯ-ಮನುಷ್ಯ ಸೌಹಾರ್ದದಿಂದ ಬದುಕಿ ಬಾಳುವ ಆ ಚೈತನ್ಯವನ್ನು, ಸದ್ಬುದ್ಧಿಯನ್ನು ದೇವರಿಂದ ನಿರೀಕ್ಷಿಸಬೇಕಲ್ಲದೆ ಸಿರಿಸಂಪದವನ್ನಲ್ಲ. ವರ್ಗಕಲಹ, ಜಾತಿಕಲಹ, ಭಾಷಾ ಕಲಹಗಳನ್ನು ಕೊನೆಗಾಣಿಸಿ, 'ನಾವಿಬ್ಬರು-ನಮಗಿಬ್ಬರು ಮಕ್ಕಳು' ಎನ್ನುವುದಕ್ಕಿಂತ, 'ನಾವೆಲ್ಲ ಒಂದೇ ಜಾತಿ ಒಂದೇ ಕುಲ' ಎಂಬ ಭಾವನೆ ನಮ್ಮಲ್ಲಿ ನೆಲೆಯೂರಿದರೆ ಆಗ ಲೋಕಲೋಕವೂ ಸಂತೃಪ್ತಿಯಿಂದ ಬೆಳಗಿತು.

ಗುರುನಾನಕರನ್ನು ಅವರ ತಂದೆ ಕೆಲವು ಅಮೂಲ್ಯ ವಸ್ತುಗಳನ್ನು ತರಲೆಂದು ಹಣ ಕೊಟ್ಟು ಪೇಟೆಗೆ ಕಳುಹಿಸಿದರಂತೆ. ಆದರೆ ನಾನಕರು ಹಸಿವೆಯಿಂದ ನರಳುತ್ತಿದ್ದ ಒಂದು ಬಡ ಸಂಸಾರಕ್ಕೆ ಆ ಹಣವನ್ನು ಕೊಟ್ಟು, ಸಂತೃಪ್ತಭಾವದಿಂದ ಅವರಿಂದ "ಕೀರ್ತಿವಂತನಾಗು" ಎಂದು ಹರಸಿಕೊಂಡು ಬಂದು ತಂದೆಗೆ ಹೇಳಿದರಂತೆ. "ಅಪ್ಪಾ, ನೀವು ಹೇಳಿದ ವಸ್ತುಗಳನ್ನು ತರಲಾಗಲಿಲ್ಲ. ಆದರೆ ಅದಕ್ಕಿಂತಲೂ ಅಮೂಲ್ಯವಾದ, ಅನರ್ಘ್ಯವಾದ ಸುವಸ್ತುವೊಂದನ್ನು ತಂದಿದ್ದೇನೆ"

"ಅದೇನು ಮಗು?" ಎಂದು ತಂದೆ ಕೇಳಿದರು.

"ಆಶೀರ್ವಾದ, ಅಪ್ಪಾ ಆಶೀರ್ವಾದ" ಎಂದರು ನಾನಕ್.

ನಾವು ಕಂಡ ಅಮೂಲ್ಯವಾದ ಪರಮಾತ್ಮನ ಆಶೀರ್ವಾದ ಪೂರ್ಣ ಸಿಗಲು ಕಾಯಬೇಕು. ಅಂಥೊಂದು ಹೃದಯದಿಂದ ಸ್ಫುರಿಸಿದ ಮಾನವೀಯತೆಯ ಹರಕೆ ಸಿಕ್ಕಿದರೆ ನಮ್ಮ ರಾಷ್ಟ್ರಕವಿಯ ವಾಣಿ ಸತ್ಯವಾದೀತು; ನಿತ್ಯನೂತನವಾದೀತು. ಮನ ಮನದಲ್ಲಿ, ಮನೆ ಮನೆಯಲ್ಲಿ ಹರ್ಷದ ಹರಿಗೋಲು-ಆನಂದದ ಸುಗ್ಗಿ ಹರಡೀತು.

'ಓಂ ಬೆಣ್ಣೆ ಬೆಟ್ಟವಾಗಲಿ, ಹಾಲುಹಳ್ಳ ಹರಿಯಲಿ, ಜೇನುಮಳೆಯು ಸುರಿಯಲಿ......' ಎಂದು ನಾವು ಹಾಡೋಣ. ಆ ದಿನವನ್ನು ತಾಳ್ಮೆಯಿಂದ ಕಾಯುತ್ತ, ತಾಯಿಯ ಪಾದಾರವಿಂದಕ್ಕೆ ಪೊಡಮಡುತ್ತ ಆಕೆಯ ಆಶೀರ್ವಾದ ಬೇಡೋಣ.

ಅರೆಗೊಡದ ಅಬ್ಬರ ಬಹಳ. ತುಂಬಿದ ಕೊಡ ತುಳುಕದು ಎಂಬ ಗಾದೆಯಂತೆ ಅಲ್ಪ ವಿದ್ಯೆ ಇರುವವರಲ್ಲಿ ವಿನಯಲೋಪವಾಗಿರುತ್ತದಲ್ಲವೇ ಅತೃಪ್ತತೆ ತಾಂಡವವಾಡುತ್ತದೆ. ತೃಪ್ತಿಯೊಂದಿದ್ದರೆ ಮನುಷ್ಯರಲ್ಲಿರುವ ಷಡ್ವೈರಿಗಳೂ ಕೆಲಸವಿಲ್ಲದೆ ಅನಾಥವಾಗಿ ಬಿದ್ದಿರಬೇಕಾಗುತ್ತದೆ.

ಹಿಂದೆ ಪರ್ಷಿಯಾದ ಮುಸಲ್ಮಾನ ಸಾಮ್ರಾಟನೊಬ್ಬ ತನ್ನ ಸಾಮ್ರಾಜ್ಯ ದಾಹಕ್ಕಾಗಿ ಕೋಟಿ ಕೋಟಿ ನಿಷ್ಪಾಪಿಗಳನ್ನು ರಣರಂಗದಲ್ಲಿ ಚೆಂಡಾಡಿದ. ಆಗ ನರಭಕ್ಷಕನೊಬ್ಬ ಯುದ್ಧರಂಗಕ್ಕೆ ಬಂದು ಹೆಣಗಳನ್ನು ನೋಡುತ್ತಾ ನಿಂತುಕೊಂಡನಂತೆ.

"ಏನು ನೋಡುತ್ತಿರುವೆ?" ಎಂದು ಕೇಳಿದ ಸಾಮ್ರಾಟ.

"ನನಗೆ ಒಂದು ಹೆಣ ಬೇಕಾಗಿತ್ತು ಕೊಡುತ್ತೀರಾ?" ಎಂದು ಕೇಳಿದ ನರಭಕ್ಷಕ.

ಸಾಮ್ರಾಟ ಗಹಗಹಿಸಿ ನಕ್ಕ. "ನನಗೆ ಒಂದು ಹೆಣವೂ ಬೇಡ ನಾನೇನೂ ತಿನ್ನುವುದಿಲ್ಲ. ಎಲ್ಲವನ್ನೂ ನೀನೇ ಒಯ್ಯಬಹುದು" ಎಂದ. "ಅರೇ, ತಿನ್ನುವುದಕ್ಕಲ್ಲವೆಂದಮೇಲೆ ಇಷ್ಟೇಕೆ ಜನರನ್ನು ಕೊಲ್ಲಿಸಿದಿರಿ?" ಎಂದು ಕೇಳಿದ ನರಭಕ್ಷಕ. ಅವನ ಮಾತಿನಿಂದ ಸಾಮ್ರಾಟನಿಗೆ ಜ್ಞಾನೋದಯವಾಯಿತು ನರಹತ್ಯೆಯನ್ನು ನಿಲ್ಲಿಸಿದ.

ಅತಿಯಾದ ದಾಹ ಅನರ್ಥಕಾರಿ ಹಿಂದೆ ಜರಾಸಂಧ ಮಾರಿ ದೇವತೆಗೆ ಬಲಿಕೊಡಲು ತೊಂಬತ್ತೊಂಬತ್ತು ರಾಜಕುಮಾರರನ್ನು ಬಂಧಿಸಿಟ್ಟು ನೂರನೆಯವನಿಗಾಗಿ ಕಾದಿದ್ದ. ಛದ್ಮವೇಷದಲ್ಲಿ ಬಂದ ಶ್ರೀಕೃಷ್ಣನೊಡನೆ "ನೀನು ನನ್ನನ್ನು ಕೊಲ್ಲಿಸುವ ಕಾರಣವೇನು?" ಎಂದು ಜರಾಸಂಧ ಪ್ರಶ್ನಿಸಿದಾಗ ಕೃಷ್ಣ ಹೇಳುತ್ತಾನೆ.

"ಒಂದು ಗ್ರಾಮಕ್ಕಾಗಿ ಒಂದು ಹಳ್ಳಿಯನ್ನು ನಾಶಮಾಡಬಹುದು; ಒಂದು ಪಟ್ಟಣಕ್ಕಾಗಿ ಒಂದು

ಗ್ರಾಮ:ವನ್ನು ಹಾಳುಗೆಡವಬಹುದು ; ಒಂದು ದೇಶಕ್ಕಾಗಿ ಒಂದು ಪಟ್ಟಣದ ನಾಶ ತಪ್ಪಲ್ಲ. ಅಂತೆಯೇ ನಿನ್ನೊಬ್ಬನ ಸ್ವಾರ್ಥಕ್ಕಾಗಿ ಈ ನೂರು ಮಂದಿಯನ್ನು ಬಲಿಕೊಟ್ಟು, ನೂರು ದೇಶಕ್ಕೆ ಅರಾಜಕತೆ ಉಂಟುಮಾಡುವ ನಿನ್ನೊರ್ವನ ಧ್ವಂಸಕ್ಕಾಗಿ ನೂರು ದೇಶಗಳಿಗೆ ಒಳಿತಾಗುವುದಾದರೆ ನಿನ ಕೊಂದರೆ ಏನು ತಪ್ಪು ?''

ತನ್ನೊಬ್ಬನ ಸ್ವಾರ್ಥ ವಿನಾಶದ ದಾರಿ. ಹೀಗಾಗಿ ಸ್ವಾರ್ಥವಿದ್ದರೆ ತೃಪ್ತಿಯಿರುವುದಿಲ್ಲ. 'ಇನ್ನೂ ಬೇಕು' ಎಂಬ ಪಿಪಾಸೆಯೇ ಕಾಡುತ್ತದೆ. ರಾವಣನ ಸ್ತ್ರೀ ಪಿಪಾಸೆ, ಅಶೋಕನ ಸಾಮ್ರಾಜ್ಯದಾಹ ಹೀಗೆ ಪ್ರತಿಯೊಂದು ದಾಹದ ಅಂತ್ಯವೂ ಘೋರ ಪರಿಣಾಮಮಯವಾಗಿದೆ. ತೃಪ್ತಿಯಿರುವಲ್ಲಿ ಸಂತೋಷವಿರುತ್ತದೆ. ಅಲ್ಲಿ ದಾರಿದ್ರ್ಯವಿರುವುದಿಲ್ಲ. ಆದರೆ ಅಂತಹ ತೃಪ್ತಿ ನಿಮಗೆ ಸಿಗಬೇಕಾದರೆ ಆಧ್ಯಾತ್ಮದ ದಾರಿಯಲ್ಲಿ ಸಾಗಿದರೆ ಮಾತ್ರ ಸಾಧ್ಯ. ಕ್ಷಣಿಕ ಸುಖಾಸಕ್ತಿ ಅಂತಿಮ ಶಾಂತಿಗೆ ಮಾರಕ. ●





# ಜೀವನಮಟ್ಟ


— ಡಿ. ವೆಂಕಟರಾವ್, ಎಂ.ಎ.,
ಸರಕಾರಿ ಕಾಲೇಜ್,
ಹಾಸನ.


ಭಾರತ, ಬಡ ಜನರು ವಾಸಿಸುವ ಶ್ರೀಮಂತ ರಾಷ್ಟ್ರವೆಂದು ಈಗ್ಗೆ ನಾಲ್ಕು ದಶಕಗಳ ಹಿಂದೆ ಇಂಗ್ಲೆಂಡಿನ ಪ್ರಸಿದ್ಧ ಅರ್ಥಶಾಸ್ತ್ರಜ್ಞರೊಬ್ಬರು ಅಭಿಪ್ರಾಯಪಟ್ಟರು. ಭಾರತದ ಪರಿಸ್ಥಿತಿಯನ್ನು ಅವಲೋಕಿಸಿದಾಗ ಈ ಮಾತಿನಲ್ಲಿ ಸತ್ಯಾಂಶವಿಲ್ಲದಿಲ್ಲ ಎನಿಸುತ್ತದೆ. ಅಚ್ಚರಿಯ ಹಾಗೂ ವಿಷಾದನೀಯ ಸಂಗತಿಯೆಂದರೆ ಈ ಪರಿಸ್ಥಿತಿಯನ್ನು ಸುಧಾರಿಸಲು ಭಾರತ ಎಷ್ಟೇ ಕ್ರಮಗಳನ್ನು ಕೈಗೊಂಡರೂ ಗೋರ್ಕಲ್ಲಮೇಲೆ ಮಳೆ ಸುರಿದಂತೆ ನಿಷ್ಫಲವಾಗುತ್ತಿರುವುದು. ಇದಕ್ಕೆ ಕಾರಣವೇನು ? ಪರಿಹಾರ ಕಾರ್ಯಕ್ರಮಗಳನ್ನು ಕೈಗೊಂಡರೂ ಪರಿಸ್ಥಿತಿ ಹಾಗೆಯೇ ಉಳಿದು ಕೌತುಕಕಾರಿಯಾಗುವುದರ ಗುಟ್ಟೇನು ? ಈ ಬಗ್ಗೆ ತಿಳಿಯಬೇಕಾದರೆ ಮೊದಲು ಭಾರತದ ಜನರ ಜೀವನ ಮಟ್ಟ ಎಷ್ಟು ಕಡಿಮೆ ಇದೆ ? ಪರದೇಶಗಳ ಜೀವನ ಮಟ್ಟದೊಂದಿಗೆ ನಮ್ಮ ಜೀವನ ಮಟ್ಟ ಹೋಲುತ್ತದೆಯೇ ? ಜೀವನಮಟ್ಟವನ್ನು ಇಂತಿಷ್ಟೇ ಎಂದು ನಿರ್ಧರಿಸುವ ಸೂಕ್ತ ಮಾನದಂಡಗಳಾವುವು ? ಇವುಗಳ ಬಗ್ಗೆ ಪರಿಶೀಲಿಸಬೇಕಾಗುವುದು.

ಭಾರತದಲ್ಲಿ ಕೃಷಿಯೇ ಬಹುಪಾಲು ಜನರ ಜೀವನಾಧಾರವೃತ್ತಿಯಾಗಿದೆ. ಇದರ ಜೊತೆಗೆ ಜನಸಂಖ್ಯೆ ಭಾರತದಲ್ಲಿ ದಿನೇ ದಿನೇ ಬೃಹದಾಕಾರತಾಳುತ್ತಿದ್ದು, ಶ್ರೀಮಂತನ ಐಶ್ವರ್ಯವನ್ನೆಲ್ಲಾ ಕಳ್ಳ ಒಂದೇ ರಾತ್ರಿಯಲ್ಲಿ ದೋಚಿಬಿಡುವಂತೆ, ರಾಷ್ಟ್ರದ ಅಭಿವೃದ್ಧಿ ಕಾರ್ಯಗಳನ್ನೆಲ್ಲಾ ನುಂಗಿ ಹಾಕುತ್ತಲಿದೆ. ಈ ಸ್ಥಿತಿಯಲ್ಲಿ ದೇಶದ ಬಡತನವನ್ನು ನಿರ್ಮೂಲನಮಾಡಿ, ಜನರ ವರಮಾನವನ್ನು ಹೆಚ್ಚಿಸಿ, ತನ್ಮೂಲಕ ಜೀವನ ಮಟ್ಟವನ್ನು ಹೆಚ್ಚಿಸಬೇಕೆಂಬ ಆಸೆ-ಆಕಾಂಕ್ಷೆಗಳನ್ನು ಹೊತ್ತಿರುವ ಸರಕಾರ ಅನೇಕ ವಲಯಗಳಲ್ಲಿ ಆ ಬಗ್ಗೆ ಕ್ರಮಗಳನ್ನು ಕೈಗೊಳ್ಳುತ್ತಿದೆ. ಈಗ ಐದನೆಯ ಪಂಚವಾರ್ಷಿಕ ಯೋಜನೆ ಮುಗಿದು, ಭಾರತ ಆರನೇಯ ಯೋಜನೆಗೆ ಕಾಲಿಡಲು ತಯಾರಾಗುತ್ತಿದೆ. ಈ ಎಲ್ಲಾ ಯೋಜನೆಗಳ ಮುಖ್ಯ ಉದ್ದೇಶ ಆರ್ಥಿಕಾಭಿವೃದ್ಧಿ ಮತ್ತು ಜನರ ಜೀವನ ಮಟ್ಟದ ಸತತ ಏರಿಕೆ. ಜನತಾ ಯೋಜನೆಯಾದ ಐದನೆಯ ಯೋಜನೆಯಂತೂ ಬಡತನದ ನಿರ್ಮೂಲನಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿತು. ಆದಾಗ್ಯೂ ಈ ದಿಸೆಯಲ್ಲಿ ಕಂಡು ಬಂದ ಫಲಿತಾಂಶ ಮಾತ್ರ ಶೂನ್ಯ. ನಮ್ಮದೇಶದ ಆರ್ಥಿಕ ಪ್ರಗತಿಯಾಗಬೇಕಾದರೆ ನಮ್ಮ ಜನರ ಜೀವನಮಟ್ಟ ಏರಬೇಕು ; ನಮ್ಮ ವಾರ್ಷಿಕ ವರಮಾನ ಅಧಿಕಗೊಳ್ಳಬೇಕು ಜನರಿಗೆ ಸಂಪದ್ಭರಿತ ಸದವಕಾಶಗಳನ್ನು ಒದಗಿಸಬೇಕು.

**ಜೀವನಮಟ್ಟ ಎಂದರೇನು ?**

ಜೀವನಮಟ್ಟ ಎನ್ನುವುದರ ನಿರ್ದಿಷ್ಟ ಅರ್ಥ ತಿಳಿಯುವುದು ಕಷ್ಟ. ಇದು ಬಹಳ ಅಸ್ಪಷ್ಟ. ಅನಿರ್ದಿಷ್ಟ. ಇದಕ್ಕೆ ಪ್ರತಿಯೊಬ್ಬನೂ ಒಂದೊಂದು ಬಗೆಯ ಅರ್ಥ ನೀಡಬಹುದು. ಒಂದು ರೇಡಿಯೋ, ಒಂದು ಕಾರು ಇದ್ದರೆ ಅದು ಒಬ್ಬನಿಗೆ ಕನಿಷ್ಠಮಿತಿಯ ಜೀವನ ಮಟ್ಟವಾಗಬಹುದು. ಎರಡುಹೊತ್ತು ಹೊಟ್ಟೆ ತುಂಬಾ ಊಟ ದೊರೆಯುವುದೇ ಇನ್ನೊಬ್ಬನಿಗೆ ಮಹದೈಶ್ವರ್ಯವಾಗಬಹುದು. ಆದ್ದರಿಂದ ನಮ್ಮ ದೇಶದ ಪರಿಸ್ಥಿತಿಗನುಸಾರವಾಗಿ ಒಂದು ವಾಸ್ತವಿಕಮಟ್ಟವನ್ನು ಏರ್ಪಡಿಸುವುದು ಅಗತ್ಯವಾಗಿದೆ.

ಜೀವನಮಟ್ಟವು ಮನುಷ್ಯನಿಗೆ ಅಗತ್ಯವಾಗಿ ಬೇಕಾದ ವಸ್ತುಗಳು, ಜೀವನಕ್ಕೆ ಹಿತಕೊಡುವ ವಸ್ತುಗಳು ಹಾಗೂ ಭೋಗವಸ್ತುಗಳ ಅನುಭೋಗವನ್ನು ಅವಲಂಬಿಸಿದೆ. ಶ್ರೀಮಂತರ ಜೀವನಮಟ್ಟ, ಮಧ್ಯಮ ವರ್ಗದವರ ಜೀವನಮಟ್ಟ ಮತ್ತು ಬಡವರ ಜೀವನ ಮಟ್ಟಗಳಲ್ಲಿ ಬಹಳಷ್ಟು ಅಂತರವನ್ನು ಕಾಣಬಹುದು. ಶ್ರೀಮಂತರು ಹೆಚ್ಚುಹಿತಕರ ಹಾಗೂ ಭೋಗವಸ್ತುಗಳನ್ನು (comforts and laxuries) ಉಪ

ಯೋಗಿಸಿದರೆ ಬಡವರ ಜೀವನದಲ್ಲಿ ಇವುಗಳಿಗೆ ಸ್ಥಾನ ಇರುವುದಿಲ್ಲ. ಶ್ರೀಮಂತರ ಜೀವನಮಟ್ಟ ಹೆಚ್ಚು, ಬಡವರ ಜೀವನಮಟ್ಟ ಕಡಿಮೆ ಎಂದು ಇದರಿಂದ ತಿಳಿಯುತ್ತದೆ ಅಂದರೆ ಜನರು ಉಪಯೋಗಿಸುವ ವಸ್ತುಗಳ ಆಧಾರದಿಂದ ಅವರ ಜೀವನಮಟ್ಟವನ್ನು ಅಳೆಯಬಹುದು. ಮನುಷ್ಯನಿಗೆ ಮೂಲಭೂತವಾಗಿ ಬೇಕಾದ ವಸ್ತುಗಳೆಂದರೆ ಆಹಾರ, ಬಟ್ಟೆ ಮತ್ತು ವಸತಿ, ಜೀವನ ಸಾಗಿಸಲು ಅತ್ಯಾವಶ್ಯಕವಾಗಿರುವ ಈ ವಸ್ತುಗಳು ತೃಪ್ತಿಗೊಳ್ಳದಿದ್ದಲ್ಲಿ ಜೀವನ ಬಡವಾಗುತ್ತದೆ: ಅರ್ಥಕಳೆದುಕೊಳ್ಳುತ್ತದೆ. ಆದ್ದರಿಂದ ಈ ವಸ್ತುಗಳು ಸಾಕಷ್ಟು ಪ್ರಮಾಣದಲ್ಲಿ ದೇಶದ ಪ್ರತಿವ್ಯಕ್ತಿಗೂ ದೊರೆಯಬೇಕು. ಜೀವನ ಸುಖಮಯವಾಗಬೇಕಾದರೆ ಇವುಗಳಲ್ಲದೆ ಇನ್ನೂ ಕೆಲವು ವಸ್ತುಗಳು ಬೇಕು. ಪ್ರತಿವ್ಯಕ್ತಿಗೂ ವಾಹನ ಸೌಲಭ್ಯ, ಔಷಧೋಪಚಾರದ ಸೌಕರ್ಯ, ವಿವಾರ ಇವುಗಳ ಅನುಕೂಲ ಇರಬೇಕು. ಯಾವುದೇ ಒಬ್ಬ ವ್ಯಕ್ತಿ ಇವುಗಳನ್ನು ಅನುಭವಿಸುವ ಪ್ರಮಾಣವು ಅವನ ವರಮಾನದ ಮಟ್ಟವನ್ನು ಅವಲಂಬಿಸಿರುತ್ತದೆ. ಸರಾಸರಿ ವರಮಾನವು ಕುಟುಂಬದ ಒಟ್ಟು ವರಮಾನ ಮತ್ತು ಕಟುಂಬದಲ್ಲಿನ ಜನರ ಸಂಖ್ಯೆ ಇವುಗಳನ್ನು ಅವಲಂಬಿಸಿರುತ್ತದೆ ಜೀವನಮಟ್ಟ ಹೆಚ್ಚಬೇಕಾದರೆ ಕುಟುಂಬದ ಆದಾಯವನ್ನು ಹೆಚ್ಚಿಸುವುದರ ಜೊತೆಗೆ ಅದರಲ್ಲಿ ಭಾಗಿಯಾಗುವ ಜನರ ಸಂಖ್ಯೆಯನ್ನು ಕಡಿಮೆ ಮಾಡಬೇಕಾಗುತ್ತದೆ.

**ಜೀವನಮಟ್ಟವನ್ನು ನಿರ್ಧರಿಸುವ ಅಂಶಗಳು :**

ಒಂದು ರಾಷ್ಟ್ರದ ಜೀವನಮಟ್ಟವು ರಾಷ್ಟ್ರೀಯ ಆದಾಯ ಮತ್ತು ಕಲಾ ಉತ್ಪನ್ನಗಳಮೇಲೆ ನಿಂತಿರುತ್ತದೆ. ಜೀವನಮಟ್ಟವು ಆಯಾ ದೇಶದ ಆರ್ಥಿಕ ಬೆಳವಣಿಗೆಯನ್ನವಲಂಭಿಸಿರುತ್ತದೆ. ದೇಶವು ಆರ್ಥಿಕವಾಗಿ ಮುಂದುವರಿದಿದ್ದರೆ ಜೀವನಮಟ್ಟ ಹೆಚ್ಚಾಗಿರುತ್ತದೆ. ದೇಶವು ಆರ್ಥಿಕವಾಗಿ ಹಿಂದುಳಿದಿದ್ದರೆ ಜೀವನಮಟ್ಟ ಕಡಿಮೆ ಇರುತ್ತದೆ. ಅಮೇರಿಕಾ ಸಂಪದ್ಭರಿತ ರಾಷ್ಟ್ರ. ಅಲ್ಲಿ ನೈಸರ್ಗಿಕ ಸಂಪತ್ತು, ಬಂಡವಾಳ, ತಾಂತ್ರಿಕ ಜ್ಞಾನಕ್ಕೆ ಕೊರತೆಇಲ್ಲ. ಇದರಿಂದಾಗಿ ಅಲ್ಲಿ ಜೀವನಮಟ್ಟ ಹೆಚ್ಚು. ಇಂಗ್ಲೆಂಡಿನಲ್ಲೂ ಜೀವನಮಟ್ಟ ಉನ್ನತವೆಂದು ಹೇಳಲಾಗುತ್ತದೆ. ಆದರೆ ಭಾರತದಲ್ಲಿ ಜೀವನಮಟ್ಟ ಬಹಳ ಕಡಿಮೆ. ಇದಕ್ಕೆ ಕಾರಣ ಭಾರತ ಕೃಷಿ ಪ್ರಧಾನದೇಶ. ಇಲ್ಲಿ ಉತ್ಪಾದನೆ ಕಡಿಮೆ. ಜನ ಸಮಾನ್ಯರ ಆದಾಯ ಕಡಿಮೆ. ಇದರಿಂದಾಗಿ ಅವರಿಗೆ ಅತ್ಯವಶ್ಯಕವಾಗಿ ಬೇಕಾದವಸ್ತುಗಳನ್ನು ಕೊಂಡುಕೊಳ್ಳಲಾಗುತ್ತಿಲ್ಲ. ಒಂದು ರಾಷ್ಟ್ರದ ಉತ್ಪನ್ನ ಹೆಚ್ಚಿದಂತೆ ಅಲ್ಲಿಯ ಜನರು ಹೆಚ್ಚುವಸ್ತುಗಳನ್ನು ಕೊಂಡುಕೊಳ್ಳಲು ಸಾಧ್ಯವಾಗುತ್ತದೆ. ಆಗ ಅವರ ಜೀವನಮಟ್ಟವೂ ಸಹ ಏರುತ್ತಾ ಹೋಗುತ್ತದೆ. ಜನರ ಜೀವನಮಟ್ಟ ಹೆಚ್ಚಿದಂತೆ ಅವರ ಆದಾಯವೂ ಹೆಚ್ಚುತ್ತದೆ. ಆದಾಯ ಹೆಚ್ಚುತ್ತಾ ಹೋದರೆ, ರಾಷ್ಟ್ರ ಆರ್ಥಿಕ ದೃಷ್ಟಿಯಿಂದ ಪ್ರಗತಿ ಹೊಂದುತ್ತಿದೆ ಎನ್ನಬಹುದು.

ಡಾಕ್ಟರ್ ಏಂಜಲ್ ಸಿದ್ಧಾಂತದ ಪ್ರಕಾರ ಜೀವನಮಟ್ಟವು ಜನರು ಖರ್ಚುಮಾಡುವುದನ್ನು ಅವಲಂಬಿಸಿರುತ್ತವೆ. ಆದಾಯ ಹೆಚ್ಚಿದಂತೆ ವ್ಯಕ್ತಿಗಳ ಖರ್ಚು ಸಹ ಹೆಚ್ಚುತ್ತಾ ಹೋಗುತ್ತದೆ. ಆದರೆ ವ್ಯಕ್ತಿಯು ಜಿಪುಣನಾಗಿದ್ದಲ್ಲಿ ಅವನ ಆದಾಯ ಹೆಚ್ಚಿದರೂ ಜೀವನಮಟ್ಟ ಕುಂಠಿತಗೊಳ್ಳುತ್ತದೆ. ಹಾಗೆಯೇ ರೈತನು ತನ್ನ ಆದಾಯವನ್ನು ವ್ಯಯಮಾಡದೆ ಕೂಡಿಟ್ಟಲ್ಲಿ ಅವನ ಜೀವನಮಟ್ಟ ಸುಧಾರಿಸುವುದಿಲ್ಲ. ವಾತಾವರಣ ಹಾಗೂ ಸಾಮಾಜಿಕ ಸ್ಥಿತಿಗತಿಗಳು ಜೀವನಮಟ್ಟದ ಮೇಲೆ ತಮ್ಮ ಪ್ರಭಾವ ಬೀರುತ್ತವೆ. ಸಾಮಾನ್ಯವಾಗಿ ಭಾರತೀಯರು ಹಬ್ಬ ಹರಿದಿನಗಳಲ್ಲಿ, ಮದುವೆ ಸಂದರ್ಭಗಳಲ್ಲಿ ಹಣವನ್ನು ವೆಚ್ಚಮಾಡುವುದು ಹೆಚ್ಚು. ಇದು ನಮ್ಮ ಜೀವನಮಟ್ಟ ಕುಂಠಿತಗೊಳ್ಳಲು ಕಾರಣವಾಗಿದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಮುಖ್ಯ ಅಂಶವೆಂದರೆ ನಮ್ಮ ದೇಶಕ್ಕೆಲ್ಲಾ ಒಂದೇ ಸರ್ವ ಸಾಧಾರಣರೂಢಿ ಸಾಧ್ಯವಿಲ್ಲ. ಆಯಾಸ್ಥಳದ ವಾಯುಗುಣ, ಆಹಾರವಶ್ಯಕತೆ, ವ್ಯಕ್ತಿ ವಿಕಾಸಾನುಕೂಲತೆ, ಪ್ರಗತಿ ಸಾಧನ ಇತ್ಯಾದಿಗಳನ್ನು ಅನುಸರಿಸಿ ಆಯಾ ರಾಷ್ಟ್ರಕ್ಕೆ ಒಂದು ರೀತಿಯನ್ನು ಏರ್ಪಡಿಸಬೇಕಾಗುತ್ತದೆ. ದಕ್ಷಿಣ ಭಾರತದಲ್ಲಿ ಅಕ್ಕಿಯೇ ಮುಖ್ಯ ಆಹಾರ. ಇಲ್ಲಿನ ವಾಯುಗುಣಕ್ಕೆ ಹೆಚ್ಚು ಬಟ್ಟೆ ಬೇಕಾಗಿಲ್ಲ. ಆದರೆ ಉತ್ತರ ಭಾರತದಲ್ಲಿ ಗೋಧಿಯೇ ಮುಖ್ಯ ಆಹಾರ. ಅಲ್ಲಿನ ಚಳಿಗೆ ಹೆಚ್ಚಿನ ಬಟ್ಟೆ ಬೇಕು. ಆದ್ದರಿಂದ ಇಲ್ಲಿ ಬಟ್ಟೆಗಳಿಗಾಗಿ ಹೆಚ್ಚು ಖರ್ಚು ಮಾಡಬೇಕಾಗುತ್ತದೆ.



ಕುರಿ ಸಾಕುವವರೂ, ಕುರಿ ಸಾಕುವ ಸಹಕಾರಿ ಸಂಘಗಳೂ ಸೇರಿ ಜಗತ್ತಿನಲ್ಲಿಯೇ ಅತ್ಯಂತ ದೊಡ್ಡದಾದ 6000 ಮೈಲಿ ಉದ್ದ, ಆರಡಿ ಎತ್ತರದ ರಕ್ಷಣಾ ಬೇಲಿಯನ್ನು ನಿರ್ಮಿಸಿದವು. ನಾಯಿ ಬಿಲ ಕೆದರಿ ಒಳಗೆ ಹೋಗದಂತೆ ತಂತಿಯ ಬಲೆಯನ್ನು ನೆಲದೊಳಗೆ ಆರಂಗುಲ ಆಳದವರೆಗೆ ಹೂಳಲಾಗಿದೆ. ಪ್ರತಿ 30ಮೈಲಿಗೊಂದರಂತೆ ಬಾಗಿಲನ್ನಿಡಲಾಗಿದೆ. ಆಧುನಿಕ ರೈಫಲ್‌ಗಳಿಂದ ಸುಸಜ್ಜಿತರಾದ ಕಾವಲುಗಾರರು ಈ ಬೇಲಿಯನ್ನು ರಾತ್ರಿ ಹಗಲು ಸದಾ ಟ್ರಕ್ಕಿನಿಂದ ಕಾಯುತ್ತಾ ಕಂಡು ಬಂದ ನಾಯಿಗಳನ್ನು ಗುಂಡಿಟ್ಟು ಕೊಲ್ಲುತ್ತಾರೆ. ಕೊಂದ ಪ್ರತಿ ನಾಯಿಗೂ ಸರಕಾರ 21 ರೂಪಾಯಿ ಬಹುಮಾನ ನೀಡುತ್ತದೆ. ಈ ಬಹುಮಾನದ ಮೊತ್ತ ಪ್ರತಿ ವರ್ಷ ಎಂಟು ಕೋಟಿ ರೂಪಾಯಿಗಳಿಗೂ ಹೆಚ್ಚು.

## 104 ಅಂತಸ್ತುಗಳ ಸೌಧ

ನ್ಯೂಯಾರ್ಕಿನ "ಎಂಪೈರ್ ಸ್ಟೇಟ್ ಕಟ್ಟಡ" 1452 ಅಡಿ ಎತ್ತರದ ಶಿಲ್ಪ. ವೈಭವ, ದರ್ಪವನ್ನು ಬೀರುತ್ತ ಮೇಘ ಮಂಡಲವನ್ನು ತೂರಿಹೋಗಿ, ಅಂತರಿಕ್ಷಕ್ಕೆ ಹಾರುವಂತೆ ಎತ್ತರವಾಗಿರುವ ಈ ಕಟ್ಟಡಕ್ಕೆ "ಗಗನ ಚುಂಬಿತ ಸೌಧ"(Sky sceraper) ಎಂದು ಹೆಸರು. ಅದಕ್ಕೆ ಭೂಮಟ್ಟದ ಕೆಳಗೆ ಎರಡು ಮಹಡಿಗಳೂ, ಮೇಲೆ 102 ಅಂತಸ್ತುಗಳೂ ಇವೆ. ಅವುಗಳ ಎತ್ತರ 1250ಅಡಿ(ಎಂದರೆ ಸುಮಾರು1.9ಫರ್ಲಾಂಗ್). ಕೊನೆ ಮಹಡಿಯ ಮೇಲೆ 222 ಅಡಿ ಎತ್ತರದ ಟೆಲಿವಿಜನ್ ಗೋಪುರವಿದೆ. ಕಟ್ಟಡದೊಳಗಿನ ಟೆಲಿಗ್ರಾಫ್, ಟೆಲಿಫೋನ್ ತಂತಿಗಳ ಉದ್ದ 3500 ಮೈಲಿ, ನೀರಿನ ನಳಿಗೆಗಳ ಉದ್ದ 60 ಮೈಲಿ. ಕಟ್ಟಡದ ತೂಕ 3,65,000 ಟನ್, ಇದಕ್ಕೆ ಉಪಯೋಗಿಸಿರುವ ಉಕ್ಕು ಪ್ಯಾರಿಸ್‌ನಿಂದ ಆಂಟ್‌ವರ್ಪ್‌ವರೆಗೆ ಎರಡು ಕಂಬಿಗಳ ಹಾದಿಯನ್ನು ಎರಡೆರಡಾಗಿ ಹಾಕಿದರೂ ಇನ್ನೂ ಮಿಗುತ್ತದೆ. ಕಿಟಕಿಗಳ ಸಂಖ್ಯೆ 6500. ದ್ವಾರಮಂಟಪಗಳ ಹಾಲುಗಳಲ್ಲಿನ ಅಮೃತಶಿಲೆಯ ಪರಿಮಾಣ ಎಷ್ಟೆಂದರೆ, ಫ್ರಾನ್ಸ್, ಇಟಲಿ, ಬೆಲ್ಜಿಯಂ ಮತ್ತು ಜರ್ಮನಿ ದೇಶಗಳ ಅನೇಕ ಕಲ್ಲುಗಣಿಗಳಲ್ಲಿ ಒಂದು ವರ್ಷಕಾಲ ಕಲ್ಲು ತೆಗೆದು ಆ ಗಣಿಗಳೆಲ್ಲಾ ಬರಿದಾದವು. ಇಲ್ಲಿನ ಅಸಂಖ್ಯಾತ ದೀಪಗಳು ಪ್ರತಿ ತಿಂಗಳಲ್ಲಿ 20,00,000 ಕಿಲೋವಾಟ್ ಪವರ್ ವಿದ್ಯುಚ್ಛಕ್ತಿಯನ್ನು ಉರಿಸುತ್ತವೆ. ಸೋಪಾನ ಮಾರ್ಗದ ಮೆಟ್ಟಲುಗಳ ಸಂಖ್ಯೆ 1860.

ಏರಿಳಿಸುವ ವಿದ್ಯುತ್ ಲಿಫ್ಟ್‌ಗಳ ಸಂಖ್ಯೆ 74. ಅವು ಓಡಾಡಲು ಮಾಡಿರುವ ಮಾರ್ಗದ ಉದ್ದ ಏಳು ಮೈಲಿ. ಅವುಗಳ ವೇಗ ಒಂದು ನಿಮಿಷಕ್ಕೆ 12,000 ಅಡಿಗಳು. ಲಿಫ್ಟ್‌ಗಳು ಒಂದು ಗಂಟೆಯಲ್ಲಿ 15,000 ಜನಗಳನ್ನು ಬೀದಿಗೆ ಒಯ್ಯಬಲ್ಲವು. ಭವನವು ಬಿಡುವಿಲ್ಲದೆ ಕೆಲಸಮಾಡುವ ಜೇನುಗಳ ಗೂಡಿನಂತಿದೆ. ಅದೇ ಒಂದು ಊರು. ಅದರೊಳಗೆ 20 ಲಕ್ಷ ಚದರಡಿ ನೆಲೆಯಲ್ಲಿ 25,000 ಬಾಡಿಗೆದಾರರಿದ್ದಾರೆ. ಟೆನಿಸ್ ಆಟಕ್ಕೆ ಪ್ರಾಂಗಣಗಳು, ಉಪಹಾರ ಗೃಹಗಳು, ಕ್ಲಬ್‌ಗಳು, ವರ್ತಕ ಮಂಡಲಿಗಳು, ಮಳಿಗೆಗಳು, ತೋಟ, ನಾಟಕಶಾಲೆ, ವಿಜ್ಞಾನ ಸಂಸ್ಥೆ ಮಂದಿರಗಳು, ವಿವಾರ ವಾಟಿಕೆಗಳು, ಅಗ್ನಿಶಾಮಕದಳ, ವಾರ್ತಾಗ್ರಾಹಕ ಮತ್ತು ವಾರ್ತಾಪ್ರಸಾರ ಕ್ಷೇತ್ರಗಳು ಮುಂತಾದುವುಗಳನ್ನೆಲ್ಲಾ ಈ ಭವನ ಒಳಗೊಂಡಿದೆ. ಪ್ರತಿ ರಾತ್ರಿ ಕಸಹೊಡೆಯುವುದೇ ಕೆಲಸವಾದ 200 ಜನರನ್ನೊಳಗೊಂಡ 6000 ಜನ ಇಲ್ಲಿ ಕೆಲಸ ಮಾಡುತ್ತಾರೆ. ಏಳು ಟೆಲಿವಿಜನ್ ಕಂಪೆನಿಗಳಿರುವ ಈ ಕೇಂದ್ರವು ಜಗತ್ತಿನಲ್ಲೇ ಅಂತ್ಯಂತ ಪ್ರಬಲವಾದದ್ದು; 5,200,000 ಟೆಲಿವಿಜನ್ ಸೆಟ್‌ಗಳನ್ನು ನಿಯಂತ್ರಿಸುತ್ತದೆ. ಶಿಖರದಲ್ಲಿ " ಫ್ರೀಡಂ ಲೈಟ್ " ಎಂಬ ನಾಲ್ಕುದೀಪಗಳು ಪೃಥ್ವಿಯ ದೀಪಗಳಲ್ಲೆಲ್ಲ ಅತ್ಯಂತ ಪ್ರಬಲವಾದ ಶಕ್ತಿಯಿಂದ ಪ್ರಜ್ವಲಿಸುತ್ತಾ ಸಾಗರ ಮತ್ತು ವಿಮಾನಗಳ ಪಥಿಕರಿಗೆ ಮಾರ್ಗದರ್ಶಕವಾಗಿವೆ.

ಈ ಕಟ್ಟಡದ ರಚನೆಗೆ 43,000,000 ಡಾಲರ್ ಖರ್ಚಾಯಿತು ಅದರ ಅಡಿಮಟ್ಟದ ಚದರ ಎರಡು ಎಕರೆ ಭೂಮಿಯ ಬೆಲೆ ಒಂದು ಚದರಡಿಗೆ 90 ಪೌಂಡು ; ಚದರ ಗಜಕ್ಕೆ 12,150 ರೂಪಾಯಿ ಆಸ್ತಿಭಾರಕ್ಕೆ ಭೂಮಿಯನ್ನು 55 ಅಡಿ ಆಳತೋಡಿ, ಸಿಮೆಂಟ್ ಯಂತ್ರಗಳಿಂದ ದಬ್ಬಿ ಪ್ರತಿಯೊಂದು ಕಂಬವೂ ಕಟ್ಟಡದ ಎತ್ತರಕ್ಕೆಲ್ಲಾ ಹಬ್ಬಿರುವ ಉಕ್ಕಿನ ಒಂದು ಕಂಬಕ್ಕೆ ತಳಹದಿಯಾಗಿದೆ. ಒಂದೊಂದು ಕಂಬದ ಮೇಲೆ ಬೀಳುವ ಭಾರ 4000 ಟನ್‌ಗಿಂತಲೂ

ಹೆಚ್ಚು, ಸಿಡಿಲು ಈ ಕಟ್ಟಡಕ್ಕೆ 950 ಕ್ಕಿಂತ ಹೆಚ್ಚು ಸಾರಿ ಹೊಡೆಯಿತು ; ಆದರೆ ಕಟ್ಟಡದ ಅಗಾಧವಾದ ಉಕ್ಕಿನ ಚೌಕಟ್ಟು ವಿದ್ಯುತ್‌ವಾಹಕದಂತೆ ವರ್ತಿಸಿ ಕಟ್ಟಡಕ್ಕೆ ಏನೂ ಕೆಡುಕಾಗಗೊಡಲಿಲ್ಲ.

**ವಿಶ್ವದ ಅತಿ ದೊಡ್ಡ ಪ್ರತಿಮೆ**

ನ್ಯೂಯಾರ್ಕ್ ಬಂದರಿನಲ್ಲಿರುವ "ಸ್ವಾತಂತ್ರ್ಯಶ್ರೀ ಕನ್ಯೆ" ಎಂಬ ಪ್ರತಿಮೆ ಜಗತ್ತಿನ ಪ್ರತಿಮೆಗಳೆಲ್ಲೆಲ್ಲಾ ಅತ್ಯಂತ ದೊಡ್ಡದು. ಅದರ ಎತ್ತರ ಭೂಮಟ್ಟದಿಂದ ತುಟ್ಟತುದಿಗೆ 305½ ಅಡಿ. 154½ ಅಡಿ ಎತ್ತರದ ಪೀಠದ ಮೇಲೆ ನಿಂತಿದೆ. ಅದರ ಮೂಗು 4½ ಅಡಿ ಉದ್ದ ; ಬೆಟ್ಟು 8 ಅಡಿ ಉದ್ದ ; ಬಾಯಿ 3 ಅಡಿ ಅಗಲ ; ಕಣ್ಣು 2½ ಅಡಿ ಅಗಲ ; ಬೆರಳಿನ ಉಗುರು 10 ಅಂಗುಲ × 10 ಅಂಗುಲ ಅದರ ತಲೆ ಎಷ್ಟು ದೊಡ್ಡದೆಂದರೆ ಅದರೊಳಗೆ 40 ಮಂದಿ ಸರಾಗವಾಗಿ ನಿಂತುಕೊಳ್ಳಬಹುದು. ಬಲತೋಳಿನ ಉದ್ದ 42 ಅಡಿ, ಬಲಗೈ ಉದ್ದ 16½ ಅಡಿ, ಸೊಂಟದ ದಪ್ಪ 3½ ಅಡಿ, ಕಿವಿಯಿಂದ ಕಿವಿಗೆ ತಲೆಯ ದಪ್ಪ 10 ಅಡಿ. ಹಿಂಸೆ ಗೊಳಗಾದ ಪರಾಧೀನ ಜನಾಂಗದವರಿಗೆ ಸ್ವಾತಂತ್ರ್ಯದ ಸಾಂಕೇತಿಕ ಸ್ಮಾರಕವಾಗಿ ಈ ಪ್ರತಿಮೆಗೆ ಮೊಟ್ಟ ಮೊದಲು "ಸ್ವಾತಂತ್ರ್ಯವು ಪ್ರಪಂಚಕ್ಕೆ ಜ್ಞಾನಪ್ರಕಾಶ ಕೊಡುವ ಪ್ರತಿಮೆ" ಎಂಬ ಹೆಸರಿತ್ತು. ಕೊನೆಗೆ ಅದಕ್ಕೆ "ಸ್ವಾತಂತ್ರ್ಯ ಪ್ರತಿಮೆ" ("Statue of Liberty") ಯೆಂಬ ಹೆಸರು ನಿಂತಿತು. ಸ್ವಾತಂತ್ರ್ಯಶ್ರೀ ದೇವತೆಯು ಎತ್ತಿ ಹಿಡಿದಿರುವ ದೀವಟಿಗೆ (torch) ಎಷ್ಟು ದೊಡ್ಡದೆಂದರೆ ಅದರೊಳಗೆ 12 ಜನರು ಸರಾಗವಾಗಿ ನಿಂತಿರಲು ಸಾಧ್ಯ.

**ಬೃಹತ್ ಗಡಿಯಾರ**

ಲಂಡನ್ನಿನ ಪಾರ್ಲಿಮೆಂಟ್ ಭವನದ ಮೇಲೆ, 320 ಅಡಿಗಳೆತ್ತರದ ವಿಕ್ಟೋರಿಯಾ ಗೋಪುರದಲ್ಲಿರುವ "ಬಿಗ್ ಬೆನ್" ಗಡಿಯಾರ ಜಗದ್ವಿಖ್ಯಾತವಾಗಿದೆ. ಅದಕ್ಕೆ 23 ಅಡಿ ವ್ಯಾಸದ ನಾಲ್ಕು ಮುಖಗಳಿವೆ, ಅದರ ನಿಮಿಷದ ಮುಳ್ಳು 14 ಅಡಿ ಉದ್ದ, ಗಂಟೆ ಮುಳ್ಳು 11 ಅಡಿ ಉದ್ದ, ಭೂಮಟ್ಟದಿಂದ 14 ಅಡಿ ಎತ್ತರ ವಿರುವ ಅದರ ಲೋಲಕವು (ಪೆಂಡ್ಯುಲಂ) 13 ಅಡಿ ಉದ್ದ, 700 ಪೌಂಡು ಭಾರ, ಅದರೊಳಗಿರುವ 13½ ಟನ್ ಭಾರದ ಘಂಟೆಯ ನಾದವನ್ನು ಕೇಳಲು ಎಷ್ಟೋಮಂದಿ ಪ್ರವಾಸಿಗಳು ಆತುರ ಆಸಕ್ತಿಯಿಂದ ಕಾದು ನಿಂತಿರುತ್ತಾರೆ.

ಲಂಡನ್ನಿನ ಗ್ರಾಂಡ್ ಬಿಲ್ಡಿಂಗ್ ಎಂಬ ಕಟ್ಟಡದ ಮೇಲೆ ಸ್ಥಾಪಿಸಿರುವ ದೈತ್ಯ ಗಾತ್ರದ ಗಡಿಯಾರದ ಮುಖ್ಯ 759 ಚದರ ಅಡಿ ಇದೆ ; 400 ಚದರ ಅಡಿಗಳಿರುವ "ಬಿಗ್ ಬೆನ್" ಗಿಂತ ಬಹುದೊಡ್ಡದು ; ನಿಮಿಷದ ಮುಳ್ಳು 17 ಅಡಿ ಉದ್ದದ ಭಾರಿ ಗರ್ಡರ್ ; ಅದರಲ್ಲಿ ಬರೆದಿರುವ ಅಕ್ಷರ, ಅಂಕಿಗಳ ಗಾತ್ರ 8 ಅಡಿ 9 ಅಂಗುಲ; ಅತ್ಯಂತ ಚಿಕ್ಕ ಅಂಕಿಯ ಗಾತ್ರ 2½ ಅಡಿ. ಈ ಗಡಿಯಾರ ರಾತ್ರಿ ಹಗಲು ನಿಯಾನ್ ದೀಪದಿಂದ ಪ್ರಜ್ವಲಿಸುತ್ತದೆ. ಅಕ್ಷರ, ಸಂಖ್ಯೆಗಳನ್ನು ಸಿರ್ವಿಸಲು 600 ಅಡಿ ಉದದಷ್ಟು ನಿಯಾನ್ ಕೊಳವೆಗಳನ್ನು ಪಯೋಗಿಸಿದೆ. ವಿದ್ಯುತ್ ತಂತಿಗಳ ಉದ್ದ 99¼ ಮೈಲಿಗಳು. ಇದರಲ್ಲಿರುವ ಉಕ್ಕಿನ ತೂಕ 14 ಟನ್ನುಗಳಿಗಿಂತಲೂ ಹೆಚ್ಚು. ಇದು ವಿದ್ಯುಚ್ಛಕ್ತಿಯಿಂದ ನಡೆಯುವುದರಿಂದ ಇದಕ್ಕೆ ಕೀಲು ಕೊಡಬೇಕಾದ ಅವಶ್ಯವಿಲ್ಲ.

## ಶ್ರೀ ಮಂ ತಿ ಕೆ

ಹಣವಿದ್ದ ಮಾತ್ರಕ್ಕೆ ಖಂಡಿತ ಸಿಗುವುದಿಲ್ಲ ಸುಖ-ಶಾಂತಿ
ಕೇಳದಿರೇನು ಶ್ರೀಮಂತ ಬಂಗಲೆಯಲ್ಲಿ ಜ್ಯೋತಿಯ ರಕ್ತವಾಂತಿ
ಮೂರು ದಿನದ ಬಾಳಿಗೇಕೆಬೇಕು ಇಷ್ಟೊಂದು ಕ್ರಾಂತಿ
ಶ್ರೀಮಂತಿಕೆಯಲ್ಲಿ ಸೌಖ್ಯವಿದೆ ಎಂಬುದು ನಮ್ಮ ಭ್ರಾಂತಿ.

— ಎಸ್. ಜಿ. ದಯಾಶಂಕರ್.



# ಉಚ್ಚ ಸಂಸ್ಕಾರದ ಪ್ರತೀಕ

ಮಾನ್ಯ ಉಪಕುಲಪತಿ
— ಶ್ರೀ ಎಸ್. ವಡೆಯರ್

ಗೃಹ ನೆಯ ಇಪ್ಪಿ ನನ್ನ ನೌಕರಿಯ ದಿನವಾನದ ಉತ್ಸಾಹದ ಕಾಲ. ಬಿ.ಇಡಿ, ಆಗಿರದಿದ್ದರೂ ಕಲಿಸುವ ಹೆಜ್ಜೆ ತುಳಿತಕಾಲ. ಈ ಹೆಜ್ಜೆಯೆ ಆಗೀಗ ಸಾಹಿತ್ಯೋಪಾಸನೆಗೆ ದಾರಿ ಮಾಡಿಕೊಟ್ಟುದುದು ಕೋಮಹರ್ಷಕ ಸನ್ನಿವೇಶ. ಧಾರವಾಡದಲ್ಲಿ ಇಂತಹ ಪೋಷಕ ಸಂಸ್ಥೆಯೊಂದು ನೆಲೆಯೂರಿ ನಿಂತಿತ್ತು. ಅದೇ ಸಾಹಿತ್ಯ ಮಂಟಪ. ಬಹುಶಃ ಅಲ್ಲಿ ಬರುವವರೆಲ್ಲ ಮಾತುಗಾರರು, ನಾಮಾಂಕಿತ ಲೇಖಕರು. ಪ್ರೊ. ಬಸವನಾಳ, ಶ್ರೀರಂಗ, ಎನ್ಕೆ, ಎಸ್. ಆರ್. ಮಳಗಿ, ಕೆ. ಜಿ. ಹಲಸಗಿ, ಎನ್. ಎ. ಹೊಸಕೇರಿ, ಪ್ರೊ. ಧಾರವಾಡಕರ್, ಸಿ. ಡಿ. ಹಳಪೇಟೆ, ದತ್ತಾತ್ರಯ ಕುಲಕರ್ಣಿ – ಮುಂತಾದ ಮಹನೀಯರ ಗರಡಿಯಲ್ಲಿ ಶ್ರಮಿಸುವ ಸಂಧಿ ಸ್ವರ್ಣ ಸಂಧಿಯೇ ಸೈ. ಈ ಎಲ್ಲವರ ಪರಿಪಾತ ಎಂಬಂತೆ ಆಗಲೆ ನನ್ನ "ವಾಗ್ ಲಹರಿ" ಎಂಬ ಏಕೋಕ್ತಿ ದೃಶ್ಯ ಸಂಕಲನಕ್ಕೆ ರಾಜ್ಯ ಪಾರಿತೋಷಕ ದೊರೆತುದು. ಕೆ. ಇ. ಬೋರ್ಡ್ ಹೈಸ್ಕೂಲಿನ ಆ ಅಭಿನಂದನಾ ಕಾರ್ಯಕ್ರಮಕ್ಕೆ ಪ್ರಧಾನ ಅತಿಥಿಗಳಾಗಿ ಆಗಮಿಸಿದ ಮಹನೀಯರೆಂದರೆ ಶ್ರೀ ಸದಾಶಿವ ವಡೆಯರರು. ಬಹುಶಃ ಅದೆ ಕಾಲೇಜಿನಲ್ಲಿ ಇಂಗ್ಲಿಷ್ ಪ್ರೊಫೆಸರರಾಗಿ (ಎಲ್. ಎಲ್. ಬಿ ಸಹ ಪಡೆದು) ಕೆಲಕಾಲ ಯಶಸ್ವಿಯಾಗಿ ಕಾರ್ಯಗೈದು ರಿಜಿಸ್ಟ್ರಾರ್‌ರಾಗಿರಬೇಕು. ಅದೇ ವಡೆಯರರನ್ನು ನಾನು ಮೊದಲಸಲ ಕಂಡದ್ದು. ಅವರ ತೂಕದ, ವಿದ್ವತ್ಪೂರ್ಣ ಮಾತುಕೇಳಿ ಪುಲಕಿತನಾದುದು. ನೈಜ ವಕೀಲಿಯ ಸ್ವರ್ಣ ಛಾಯೆ ಅಲ್ಲಿ ಸುಳಿದಿತ್ತು. ಅನವಶ್ಯಕ ವಿವರವಿಲ್ಲ. ಕೊಂಚ ಕೂಡ ದಾರಿಬಿಡದ ವಾಕ್‌ವಾಹ. ಅಲ್ಲಲ್ಲಿ ಕಾವ್ಯನ ನಾಟಕೀಯತೆಯ ಝುಳುಕು. ತಾರುಣ್ಯದೊಡನೆ ಸಂಯವು ಸಂಧಿಸಿದುದು ಅಪೂರ್ವವೇ. ಇಷ್ಟಾಗಿ "Be brif, be bright, be gone" ಶೀವಿ ವಿಲಾಸಿ ಮಾತುಗಾರರಿಗೆ ಶ್ರೀಯುತರು ಮಾದರಿ ಎಂದು ನಾನು ಆಗಲೇ ಅವರ ಬಗೆಗೆ ಕಂಡುಕೊಂಡದ್ದು. "words of learned length and thendering Social" ದ ಸಾಮಾನ್ಯ ಪರಂಪರೆಗೆ ಹೊರತು ಆ ವಾಣಿ ಜೊತೆಗೆ ಲ್ಯಾಂಬನ Lambent humour ದ ಪಡಿನೆಲಲು. ನಾನು ಅಂತೇ ಮನದಲ್ಲಿಸೈ ಎಂದೆ ಆ ಮಾತುಗಾರಿಕೆಯ ಕ್ಷಣಿಕ ಜಾದೂವಿಗೆ ವಿಚಾರ ವಾಹಕತೆಗಾಗಿ ಅವರಿಗೆ ಸಮಾಧಾನ, ಜನತೆಗೆ ರಂಜನೆ ಹೆಚ್ಚೇನು ಬೇಕು ?

ಕಾಲ ಕಳೆಯಿತು. ನನ್ನ ಸಾಹಿತ್ಯೋಪಾಸನೆಗೆ ಪುಟ ದೊರೆತಂತೆ ಶ್ರೀ ವಡೆಯರರ ವ್ಯಕ್ತಿತ್ವದ ಸೂಕ್ಷ್ಮ ಅವಲೋಕನ ಸಾಗಿಯೇ ಇದ್ದಿತು. ಶ್ರೀ ಕುವೆಂಪು ಅವರಂತೆ ಬಹುಶಃ ಇವರೂ ಕೀರ್ತಿಯನ್ನು ಶನಿಯೆಂದೇ ಪರಿಗ್ರಹಿಸಿರಬೇಕು. ಅಂತೇ ಹೆಸರಿಗೂ ಇವರಿಗೂ ಬದ್ಧ ವೈರ ಎಂದು ನನಗೆ ಆಗೀಗ ಎನಿಸುತ್ತಲೇ ಇದ್ದಿತು. ತುಂಬಿದ ಕೊಡ ಅವರು ! ಆಡಂಬರ ಹೇಗೆ ಇಂತಹ ವ್ಯಕ್ತಿತ್ವದಿಂದ ಪ್ರವಹಿಸೀತು ? ಅಂತೇ ಶ್ರೀಯುತರು ಆಂಗ್ಲ ಸಾಹಿತ್ಯ ನಿರ್ಮಿತಿಗೆ ಮಾರುಹೋಗಿ ಆ ದಿಸೆಯಲ್ಲಿ ಘನತೆವೆತ್ತರೂ ಅಹಂಕಾರದ ಲವಲೇಶವಿಲ್ಲ. ಮೆರವಣಿಗೆಯ ಹವ್ಯಾಸ ಕೇಳಬಾರದು.

ಬರ್ನಾರ್ಡ್ ಷಾ ಘನವಂತ ನಾಟಕಕಾರನೆಂದು ಸಾಹಿತ್ಯೋಪಾಸಕರಿಗೆ ಗೊತ್ತಿಲ್ಲವೆ ? ಶ್ರೀ ವಡೆಯರಿಗೆ ಈ ವಿಡಂಬನಾಕಾರ ನಾಟ್ಯ ಅಧಿದೇವತೆಯ ಪ್ರಭಾವಲಯದಲ್ಲಿ ಬರಲು ತಡ ಹಿಡಿಯಲಿಲ್ಲ, ಅವನ ಜೋನ್ ಆಫ್ ಆರ್ಕ ಕಂಡು ನಲಿಹಕ ಆ ಸೌರಭವನ್ನು ವಿದ್ವನ್ಮಂಡಲಿಗೆ ಹಂಚಲು ಹವಣಿಸಿದರು. ಯಶಸ್ವಿ ಆದರು ಜೋನ್ ಅಸಾಮಾನ್ಯ ವ್ಯಕ್ತಿ. ಕಾಣುವವರ ಕಣ್ಣಲ್ಲಿ ದೇವಿ. ಆದರೆ ಮಹಾತ್ಮೆಕಾಂಕ್ಷೆಯ ಅಪರಾವತಾರ. ಫ್ರಾನ್ಸ್ ಎಂದರೆ ಬಿದ್ದು ಸಾಯುವವಳು ಅದಕ್ಕಾಗಿ ಸತ್ತಳು ಅಮರಳಾದಳು !

"Joan was burnt for here by witchcraft sorcery in 1431. She

ಹೆಚ್ಚು, ಸಿಡಿಲು ಈ ಕಟ್ಟಡಕ್ಕೆ 950 ಕ್ಕಿಂತ ಹೆಚ್ಚು ಸಾರಿ ಹೊಡೆಯಿತು ; ಆದರೆ ಕಟ್ಟಡದ ಅಗಾಧವಾದ ಉಕ್ಕಿನ ಚೌಕಟ್ಟು ವಿದ್ಯುತ್‌ವಾಹಕದಂತೆ ವರ್ತಿಸಿ ಕಟ್ಟಡಕ್ಕೆ ಏನೂ ಕೆಡುಕಾಗಗೊಡಲಿಲ್ಲ.

### ವಿಶ್ವದ ಅತಿ ದೊಡ್ಡ ಪ್ರತಿಮೆ

ನ್ಯೂಯಾರ್ಕ್ ಬಂದರಿನಲ್ಲಿರುವ "ಸ್ವಾತಂತ್ರ್ಯಶ್ರೀ ಕನ್ಯೆ" ಎಂಬ ಪ್ರತಿಮೆ ಜಗತ್ತಿನ ಪ್ರತಿಮೆಗಳೆಲ್ಲೆಲ್ಲಾ ಅತ್ಯಂತ ದೊಡ್ಡದು. ಅದರ ಎತ್ತರ ಭೂಮಟ್ಟದಿಂದ ತುಟ್ಟತುದಿಗೆ $305\frac{1}{2}$ ಅಡಿ. $154\frac{1}{2}$ ಅಡಿ ಎತ್ತರದ. ಪೀಠದ ಮೇಲೆ ನಿಂತಿದೆ. ಅದರ ಮೂಗು $4\frac{1}{2}$ ಅಡಿ ಉದ್ದ ; ಬೆಟ್ಟು 8 ಅಡಿ ಉದ್ದ ; ಬಾಯಿ 3 ಅಡಿ ಅಗಲ ; ಕಣ್ಣು $2\frac{1}{2}$ ಅಡಿ ಅಗಲ ; ಬೆರಳಿನ ಉಗುರು 10 ಅಂಗುಲ × 10 ಅಂಗುಲ ಅದರ ತಲೆ ಎಷ್ಟು ದೊಡ್ಡದೆಂದರೆ ಅದರೊಳಗೆ 40 ಮಂದಿ ಸರಾಗವಾಗಿ ನಿಂತುಕೊಳ್ಳಬಹುದು. ಬಲತೋಳಿನ ಉದ್ದ 42 ಅಡಿ, ಬಲಗೈ ಉದ್ದ $16\frac{1}{2}$ ಅಡಿ, ಸೊಂಟದ ದಪ್ಪ $3\frac{1}{2}$ ಅಡಿ, ಕಿವಿಯಿಂದ ಕಿವಿಗೆ ತಲೆಯ ದಪ್ಪ 10 ಅಡಿ. ಹಿಂಸೆಗೊಳಗಾದ ಪರಾಧೀನ ಜನಾಂಗದವರಿಗೆ ಸ್ವಾತಂತ್ರ್ಯದ ಸಾಂಕೇತಿಕ ಸ್ಮಾರಕವಾಗಿ ಈ ಪ್ರತಿಮೆಗೆ ಮೊಟ್ಟಮೊದಲು "ಸ್ವಾತಂತ್ರ್ಯವು ಪ್ರಪಂಚಕ್ಕೆ ಜ್ಞಾನಪ್ರಕಾಶ ಕೊಡುವ ಪ್ರತಿಮೆ" ಎಂಬ ಹೆಸರಿತ್ತು. ಕೊನೆಗೆ ಅದಕ್ಕೆ "ಸ್ವಾತಂತ್ರ್ಯ ಪ್ರತಿಮೆ" ("Statue of Liberty") ಯೆಂಬ ಹೆಸರು ನಿಂತಿತು. ಸ್ವಾತಂತ್ರ್ಯಶ್ರೀ ದೇವತೆಯು ಎತ್ತಿ ಹಿಡಿದಿರುವ ದೀವಟಿಗೆ (torch) ಎಷ್ಟು ದೊಡ್ಡದೆಂದರೆ ಅದರೊಳಗೆ 12 ಜನರು ಸರಾಗವಾಗಿ ನಿಂತಿರಲು ಸಾಧ್ಯ.

### ಬೃಹತ್ ಗಡಿಯಾರ

ಲಂಡನ್ನಿನ ಪಾರ್ಲಿಮೆಂಟ್ ಭವನದ ಮೇಲೆ, 320 ಅಡಿಗಳೆತ್ತರದ ವಿಕ್ಟೋರಿಯಾ ಗೋಪುರದಲ್ಲಿರುವ "ಬಿಗ್ ಬೆನ್" ಗಡಿಯಾರ ಜಗದ್ವಿಖ್ಯಾತವಾಗಿದೆ, ಅದಕ್ಕೆ 23 ಅಡಿ ವ್ಯಾಸದ ನಾಲ್ಕು ಮುಖಗಳಿವೆ, ಅದರ ನಿಮಿಷದ ಮುಳ್ಳು 14 ಅಡಿ ಉದ್ದ, ಗಂಟೆ ಮುಳ್ಳು 11 ಅಡಿ ಉದ್ದ, ಭೂಮಟ್ಟದಿಂದ 14 ಅಡಿ ಎತ್ತರ ವಿರುವ ಅದರ ಲೋಲಕವು (ಪೆಂಡ್ಯುಲಂ) 13 ಅಡಿ ಉದ್ದ, 700 ಪೌಂಡು ಭಾರ, ಅದರೊಳಗಿರುವ $13\frac{1}{2}$ ಟನ್ ಭಾರದ ಘಂಟೆಯ ನಾದವನ್ನು ಕೇಳಲು ಎಷ್ಟೋಮಂದಿ ಪ್ರವಾಸಿಗಳು ಆತುರ ಆಸಕ್ತಿಯಿಂದ ಕಾದು ನಿಂತಿರುತ್ತಾರೆ.

ಲಂಡನ್ನಿನ ಗ್ರಾಂಡ್ ಬಿಲ್ಡಿಂಗ್ ಎಂಬ ಕಟ್ಟಡದ ಮೇಲೆ ಸ್ಥಾಪಿಸಿರುವ ದೈತ್ಯ ಗಾತ್ರದ ಗಡಿಯಾರದ ಮುಖ್ಯ 759 ಚದರ ಅಡಿ ಇದೆ ; 400 ಚದರ ಅಡಿಗಳಿರುವ "ಬಿಗ್ ಬೆನ್" ಗಿಂತ ಬಹುದೊಡ್ಡದು ; ನಿಮಿಷದ ಮುಳ್ಳು 17 ಅಡಿ ಉದ್ದದ ಭಾರಿ ಗರ್ಡರ್ ; ಅದರಲ್ಲಿ ಬರೆದಿರುವ ಅಕ್ಷರ, ಅಂಕಿಗಳ ಗಾತ್ರ 8 ಅಡಿ 9 ಅಂಗುಲ; ಅತ್ಯಂತ ಚಿಕ್ಕ ಅಂಕಿಯ ಗಾತ್ರ $2\frac{1}{2}$ ಅಡಿ, ಈ ಗಡಿಯಾರ ರಾತ್ರಿ ಹಗಲು ನಿಯಾನ್ ದೀಪದಿಂದ ಪ್ರಜ್ವಲಿಸುತ್ತದೆ, ಅಕ್ಷರ, ಸಂಖ್ಯೆಗಳನ್ನು ನಿರ್ಮಿಸಲು 600 ಅಡಿ ಉದದಷ್ಟು ನಿಯಾನ್ ಕೊಳವೆಗಳನ್ನು ಪಯೋಗಿಸಿದೆ. ವಿದ್ಯುತ್ ತಂತಿಗಳ ಉದ್ದ $99\frac{1}{4}$ ಮೈಲಿಗಳು. ಇದರಲ್ಲಿರುವ ಉಕ್ಕಿನ ತೂಕ 14 ಟನ್ನುಗಳಿಗಿಂತಲೂ ಹೆಚ್ಚು. ಇದು ವಿದ್ಯುಚ್ಛಕ್ತಿಯಿಂದ ನಡೆಯುವುದರಿಂದ ಇದಕ್ಕೆ ಕೀಲು ಕೊಡಬೇಕಾದ ಅವಶ್ಯವಿಲ್ಲ.

---

### ಶ್ರೀ ಮಂ ತಿ ಕೆ

ಹಣವಿದ್ದಮಾತ್ರಕ್ಕೆ ಖಂಡಿತ ಸಿಗುವುದಿಲ್ಲ ಸುಖ-ಶಾಂತಿ
ಕೇಳಿದಿರೇನು ಶ್ರೀಮಂತ ಬಂಗಲೆಯಲ್ಲಿ ಜ್ಯೋತಿಯ ರಕ್ತವಾಂತಿ
ಮೂರು ದಿನದ ಬಾಳಿಗೇಕೆಬೇಕು ಇಷ್ಟೊಂದು ಕ್ರಾಂತಿ
ಶ್ರೀಮಂತಿಕೆಯಲ್ಲಿ ಸೌಖ್ಯವಿದೆ ಎಂಬುದು ನಮ್ಮ ಭ್ರಾಂತಿ.

— ಎಸ್. ಜಿ. ದಯಾಶಂಕರ್.



# ಉಚ್ಚ ಸಂಸ್ಕಾರದ ಪ್ರತೀಕ

ಮಾನ್ಯ ಉಪಕುಲಪತಿ
— ಶ್ರೀ ಎಸ್. ವಡೆಯರ್

೧೯೫೬ ನೆಯ ಇಸ್ವಿ ನನ್ನ ನೌಕರಿಯ ದಿನಮಾನದ ಉತ್ಸಾಹದ ಕಾಲ. ಬಿ.ಇಡಿ, ಆಗಿರದಿದ್ದರೂ ಕಲಿಸುವ ಹೆಜ್ಜೆ ತುಳಿತಕಾಲ. ಈ ಹೆಜ್ಜೆಯೆ ಆಗೀಗ ಸಾಹಿತ್ಯೊಪಾಸನೆಗೆ ದಾರಿ ಮಾಡಿಕೊಟ್ಟದುದು ಕೋಮಹರ್ಷಕ ಸನ್ನಿವೇಶ. ಧಾರವಾಡದಲ್ಲಿ ಇಂತಹ ಪೋಷಕ ಸಂಸ್ಥೆಯೊಂದು ನೆಲೆಯೂರಿ ನಿಂತಿತ್ತು. ಅದೇ ಸಾಹಿತ್ಯ ಮಂಟಪ. ಬಹುಶಃ ಅಲ್ಲಿ ಬರುವವರೆಲ್ಲ ಮಾತುಗಾರರು, ನಾಮಾಂಕಿತ ಲೇಖಕರು. ಪ್ರೊ. ಬಸವನಾಳ, ಶ್ರೀರಂಗ, ಎನ್ಕೆ, ಎಸ್. ಆರ್. ಮಳಗಿ, ಕೆ. ಜಿ. ಹಲಸಗಿ, ಎನ್. ಎ. ಹೊಸಕೇರಿ, ಪ್ರೊ. ಧಾರವಾಡಕರ್, ಸಿ. ಡಿ. ಹಳಪೇಟ, ದತ್ತಾತ್ರಯ ಕುಲಕರ್ಣಿ – ಮುಂತಾದ ಮಹನೀಯರ ಗರಡಿಯಲ್ಲಿ ಶ್ರಮಿಸುವ ಸಂಧಿ ಸ್ವರ್ಣ ಸಂಧಿಯೇ ಸೈ. ಈ ಎಲ್ಲವರ ಪರಿಪಾತ ಎಂಬಂತೆ ಆಗಲೆ ನನ್ನ "ವಾಗ್ ಲಹರಿ" ಎಂಬ ಏಕೋಕ್ತಿ ದೃಶ್ಯ ಸಂಕಲನಕ್ಕೆ ರಾಜ್ಯ ಪಾರಿತೋಷಕ ದೊರೆತುದು. ಕೆ. ಇ. ಬೋರ್ಡ್ ಹೈಸ್ಕೂಲಿನ ಆ ಅಭಿನಂದನಾ ಕಾರ್ಯಕ್ರಮಕ್ಕೆ ಪ್ರಧಾನ ಅತಿಥಿಗಳಾಗಿ ಆಗಮಿಸಿದ ಮಹನೀಯರೆಂದರೆ ಶ್ರೀ ಸದಾಶಿವ ವಡೆಯರರು. ಬಹುಶಃ ಆದೆ ಕಾಲೇಜಿನಲ್ಲಿ ಇಂಗ್ಲಿಷ್ ಪ್ರೊಫೆಸರರಾಗಿ (ಎಲ್. ಎಲ್. ಬಿ ಸಹ ಪಡೆದು) ಕೆಲಕಾಲ ಯಶಸ್ವಿಯಾಗಿ ಕಾರ್ಯಗೈದು ರಿಜಿಸ್ಟ್ರಾರ್‌ರಾಗಿರಬೇಕು. ಆದೇ ವಡೆಯರರನ್ನು ನಾನು ಮೊದಲಸಲ ಕಂಡದ್ದು. ಅವರ ತೂಕದ, ವಿದ್ವತ್ಪೂರ್ಣ ಮಾತುಕೇಳಿ ಪುಲಕಿತನಾದುದು. ನೈಜ ವಕೀಲಿಯ ಸ್ವರ್ಣ ಛಾಯೆ ಅಲ್ಲಿ ಸುಳಿದಿತ್ತು. ಅನವಶ್ಯಕ ವಿವರವಿಲ್ಲ. ಕೊಂಚ ಕೂಡ ದಾರಿಬಿಡದ ವಾಕ್‌ವಾಹ. ಅಲ್ಲಲ್ಲಿ ಕಾವ್ಯನ ನಾಟಕೀಯತೆಯ ಝುಳುಕು. ತಾರುಣ್ಯದೊಡನೆ ಸಂಯುವು ಸಂಧಿಸಿದುದು ಅಪೂರ್ವವೇ. ಇಷ್ಟಾಗಿ "Be brif, be bright, be gone" ಶೀವಿ ವಿಲಾಸಿ ಮಾತುಗಾರರಿಗೆ ಶ್ರೀಯುತರು ಮಾದರಿ ಎಂದು ನಾನು ಆಗಲೇ ಅವರ ಬಗೆಗೆ ಕಂಡುಕೊಂಡದ್ದು. "words of learned length and thendering Social" ದ ಸಾಮಾನ್ಯ ಪರಂಪರೆಗೆ ಹೊರತು ಆ ವಾಣಿ ಜೊತೆಗೆ ಲ್ಯಾಂಬನ Lambent humour ದ ಪಡಿನೆಳಲು. ನಾನು ಅಂತೇ ಮನದಲ್ಲಿಸೈ ಎಂದೆ ಆ ಮಾತುಗಾರಿಕೆಯ ಕ್ಷಣಿಕ ಜಾದೂವಿಗೆ ವಿಚಾರ ವಾಹಕತೆಗಾಗಿ ಅವರಿಗೆ ಸಮಾಧಾನ, ಜನತೆಗೆ ರಂಜನೆ ಹೆಚ್ಚೇನು ಬೇಕು ?

ಕಾಲ ಕಳೆಯಿತು. ನನ್ನ ಸಾಹಿತ್ಯೋಪಾಸನೆಗೆ ಪುಟ ದೊರೆತಂತೆ ಶ್ರೀ ವಡೆಯರರ ವ್ಯಕ್ತಿತ್ವದ ಸೂಕ್ಷ್ಮ ಅವಲೋಕನ ಸಾಗಿಯೇ ಇದ್ದಿತು. ಶ್ರೀ ಕುವೆಂಪು ಅವರಂತೆ ಬಹುಶಃ ಇವರೂ ಕೀರ್ತಿಯನ್ನು ಶನಿಯೆಂದೇ ಪರಿಗ್ರಹಿಸಿರಬೇಕು. ಅಂತೇ ಹೆಸರಿಗೂ ಇವರಿಗೂ ಬದ್ಧ ವೈರ ಎಂದು ನನಗೆ ಆಗೀಗ ಎನಿಸುತ್ತಲೇ ಇದ್ದಿತು. ತುಂಬಿದ ಕೊಡ ಅವರು ! ಆಡಂಬರ ಹೇಗೆ ಇಂತಹ ವ್ಯಕ್ತಿತ್ವದಿಂದ ಪ್ರವಹಿಸೀತು ? ಅಂತೇ ಶ್ರೀಯುತರು ಆಂಗ್ಲ ಸಾಹಿತ್ಯ ನಿರ್ಮಿತಿಗೆ ಮಾರು ಹೋಗಿ ಆ ದಿಸೆಯಲ್ಲಿ ಘನತೆವೆತ್ತರೂ ಅಹಂಕಾರದ ಲವಲೇಶವಿಲ್ಲ. ಮೆರವಣಿಗೆಯ ಹವ್ಯಾಸ ಕೇಳಬಾರದು.

ಬರ್ನಾರ್ಡ್ ಷಾ ಘನವಂತ ನಾಟಕಕಾರನೆಂದು ಸಾಹಿತ್ಯೋಪಾಸಕರಿಗೆ ಗೊತ್ತಲ್ಲವೆ ? ಶ್ರೀ ವಡೆಯರಿಗೆ ಈ ವಿಡಂಬನಾಕಾರ ನಾಟ್ಯ ಅಧಿದೇವತೆಯ ಪ್ರಭಾವಲಯದಲ್ಲಿ ಬರಲು ತಡ ಹಿಡಿಯಲಿಲ್ಲ, ಅವನ ಜೋನ್ ಆಫ್ ಆರ್ಕ್ ಕಂಡು ನಲಿದರು ಆ ಸೌರಭವನ್ನು ವಿದ್ವನ್ಮಂಡಲಿಗೆ ಹಂಚಲು ಹವಣಿಸಿದರು. ಯಶಸ್ವಿ ಆದರು ಜೋನ್ ಅಸಾಮಾನ್ಯ ವ್ಯಕ್ತಿ ಕಾಣುವವರ ಕಣ್ಣಲ್ಲಿ ದೇವಿ. ಆದರೆ ಮಹಾತ್ವಕಾಂಕ್ಷೆಯ ಅಪರಾವತಾರ. ಫ್ರಾನ್ಸ್ ಎಂದರೆ ಬಿದ್ದು ಸಾಯುವವಳು ಅದಕ್ಕಾಗಿ ಸತ್ತಳು ಅಮರಳಾದಳು !

"Joan was burnt for here by witchcraft sorcery in 1431. She

is designated as venerable in 1908. Finally she is eannonized" ಮುಗಿಯಿತು ಕತೆ. "Joan of Arc is porlrayed by show as a nationalist preaching doct ines dangerous to the international principles of Feudalism" ಮನಸೀಯ ಮಾತು. ಈ ವಿಚಾರ ಪ್ರಣಾಲಿಗೆ ಸ್ವರ್ಣದರ್ಪಣ ಹಿಡಿದುದು ವಡೆಯರರ ಗೈಮೆ.

ಇದೇ ಸರಣಿಯಲ್ಲಿ ನೋಬೆಲ್ ಪಾರಿತೋಷಕ ವಿಜೇತ ರವೀಂದ್ರರ ಕೊಡುಗೆಯನ್ನು ಕನ್ನಡಿಗರಿಗೆ ಮನದಟ್ಟಾಗಿಸಿದುದು ಶ್ರೀಯುತರ ಮಹಾತ್ಕಾರ್ಯ. "Suttlety of rhythm untranslatable delieacies of colours, metrical invention" ಇಷ್ಟೆಲ್ಲ ಇದ್ದ ಅವರ ಘನತೆಯ ಅರಿವನ್ನು ಕಲೋಪಾಸಕರಿಗೆ ರಸವತ್ತಾಗಿ ಮಾಡಿಕೊಟ್ಟುದುದು ಶ್ರೀ ವಡೆಯರರ ಪೇಲ್ಮೆ.

ವಡೆಯರರ ಅಭ್ಯಾಸಿ ಮನೋವೃತ್ತಿಯ ಪಡಿನೆಳಲೆಂದರೆ ಅವರ ಲಲಿತ ಪ್ರಬಂಧಗಳು. ಅವು ತಲೆಹರಟೆಗಳು ಎಂದೂ ಅಲ್ಲ. ವಿಡಂಬನೆ ಕೇಳಬಾರದು. ಆದರೆ ರಸವಂತಿಕೆಗೆ ಊನ ಇಲ್ಲ. ನೈಜ ಪ್ರಬಂಧದ ಹೃದಯ ಬೇಕಿದ್ದರೆ ಅವರ "loose salls of the mind, irregular un digested" ಬರವಣಿಗೆಯನ್ನು ನೋಡಬೇಕು. ಸಾಕು ಮುಂದಕ್ಕೆ ಇನ್ನೊಂದು ಅಭಿದಾನ ವಡೆಯರರ ಪ್ರಬಂಧಗಳು. ಅಲ್ಲಿಯ ವೈವಿಧ್ಯ ಬೆಕ್ಕಸಗೊಳಿಸುವಂತಹದು ಒಂದು ಮಾನದಿಂದ ಒಮ್ಮೊಮ್ಮೆ ಅವರ ಬರವಣಿಗೆ ನಿರಾಭರಣ ಸೌಂಧರ್ಯವು ವಿನಯ ಮೂರ್ತಿವೆತ್ತಾಗಿ ಹಣಿಕಿಕ್ಕುವುದು ಅವರ ಲೇಖನಗಳಲ್ಲಿ ಅಧ್ಯಯನ ಅಧ್ಯಾಪನದ ಉತ್ಕಟ ಹಂಬಲು ಕಾಣಬೇಕಿದ್ದಲ್ಲಿ ನಾವು ವಡೆಯರರ ಲೇಖನ ಓದಬೇಕು. ಆ ಸವಿ ಸವಿಯಬೇಕು. ಬಹುತರವಾಗಿ ಬೇಕನ್‌ನ್ನೆ ಶ್ರೀಯುತರಿಗೆ ಅಚ್ಚುಮೆಚ್ಚಿನ ಪ್ರಬಂಧಕಾರನಿರಬೇಕು.

Reading maketh a full man writing an exact man. conference areadys man, ಎಂಬ ಬೇಕನ್‌ನ ತ್ರಿಸೂತ್ರಗಳೇ ಇವರಿಗೆ ರತ್ನತ್ರಯಗಳಾಗಿ ಹೊಳೆದಿರಬೇಕು ಸರಿ.

ವಡೆಯರರು ಮೂಲತಃ ದಕ್ಷ ಆಡಳಿತಗಾರರು ಮಾತಿನಲ್ಲಿ ಔಚಿತ್ಯ ಪ್ರಜ್ಞೆಯುಳ್ಳವರು. ವರಕೊಟ್ಟಂತೆ ಮಾತಾಡುವವರು ಎಂದು ಸಂಶಯ ಸುಳಿದರೂ ಆ ಸರಣಿಯಲ್ಲಿ ಹಿತವೇ ನೆಲಸಿದೆ. ಬಿಂಕಕ್ಕೂ ಇವರಿಗೂ ಎಣ್ಣೆ ಸೀಗೆ ಸಂಬಂಧ.

"What is this life is full of care? we have no time to stand and stare." ಎಂದು ಮಿಡುಕುತ್ತ ಕೂಡ್ರುವ ಚಟ ಇವರಿಗೆ ಬಿದ್ದಿಲ್ಲ! ಜಲಬಿಂದು ನಿಪಾತೇನ ಕ್ರಮಶಃ ಪೂರ್ಯತೆ ಘಟಕ ಎಂಬಂತೆ ಇವರು ಸತದೋದ್ಯಮಿಗಳು.

"In small proportions we just beauties see In short measures life may perfectbe" ಎಂಬ ಬೆನ್‌ಜಾನ್ಸನ್ ಕವಿಯ ಉಕ್ತಿ ಇವರಿಗೆ ಮಾರ್ಗದರ್ಶಕವಾಗಿರಲಿ ಸಾಕು. ನೈಜ ಕಲೋಪಾಸಕನ ಶ್ರದ್ಧಾನ್ವಿತ ಬಾಳಿನ ಲಕ್ಷಣವಿದು.

ಶ್ರೀಯುತರ ಸ್ವಭಾವ ತುಸುಮಾದವೆ ಮೃದು ಎಂದು ಹೇಳಬೇಕು. ಅಷ್ಟು ನಾವು ವಿನಯದ ಆಗರ ಇವರು. ಒಮ್ಮೆ ನಿರುಕಿಸಿದರೆ ಸಾಕು. ಥಟ್ಟನೆ ಕಲ್ಪನೆ ಬರುವದು. ಹಸನ್ಮುಖಿಗಳು. ಆಡಿದರೆ ಭಾವಪೂರ್ಣ ನುಡಿ ಆಡಿಯಾರೆ ಹೊರತೂ ಕೆಲಸಕ್ಕೆ ಬಾರದವಲ್ಲ. ಆದರೂ ನಿತ್ಯ ಜೀವನದಲ್ಲಿ ವಿನೋದ ಪ್ರಜ್ಞೆಯನ್ನು ಮೈಗೊಡಿಸಿಕೊಂಡವರೇ ವಿರಳ. ಅದೊಂದಿಲ್ಲದಿದ್ದರೆ ಜೀವನ ನೀರಸವೇ ಸೈ. ಅದು ಉತ್ತಾನ ಮಟ್ಟದ ಸಂಸ್ಕೃತಿಯ ದ್ಯೂತಕ. "Senlleness is indeed the test of Sentlementiness" ಎಂದು ನಾವು ಓದುವೆವು. ಆದರೆ ಇಂಥ ಗುಣ ದೊರೆಯುವದೇ ವಿರಳ. ಹೆಚ್ಚಿನ ಹುದ್ದೆಯಲ್ಲಿ ಇರುವವರಿಗೆ ಅಹಂಕಾರದ ಸುಳಿ ಸುಖ ಬೇಗ ತಗಲುವದುಂಟು. ಜೀವನದ ಸುಖ ದುಃಖ ಅರಿತವರು, ಉಂಡವರು, ಇಂತಹರು ಮಾರ್ದವವನ್ನೇ ಮೈಗೂಡಿಕೊಂಡಾರು. ವೇದಶಾಸ್ತ್ರ ಪುರಾಣೇನ ಕಾಲೊಗಚ್ಛತಿ ಧೀಮತಾಂ ಎಂಬಂತೆ ಆಡಳಿತದ ಇನ್ನುಳಿದ ವೇಳೆಯನ್ನು ಉಪಯುಕ್ತ ಓದಿನಲ್ಲಿ ಹಾಕುವದು ಇವರ ಅಭಿರುಚಿ. ಇದು ಸಣ್ಣ ಸಂಗತಿಯಲ್ಲ. ಉಚ್ಚ ಸಂಸ್ಕಾರದ ಪ್ರತೀಕ.

ಇದೀಗ ಕಿರಿಯರಿಗೂ ಹಿರಿಯರಿಗೂ ಅಭಿಮಾನಾಸದ ಎನಿಸಿದ ವ್ಯಕ್ತಿತ್ವ, ಅನುಪಮ ವ್ಯಕ್ತಿತ್ವ! ●



ಹೀಗೆ ಒಂದು ಕಡೆ ಅತ್ಯಗತ್ಯವಾದುದು ಇನ್ನೊಂದು ಕಡೆ ಅನಗತ್ಯವಾಗುತ್ತದೆ. ಹೀಗೆ ಆದಾಯ, ವೆಚ್ಚ, ರಾಷ್ಟ್ರದ ಉತ್ಪಾದನೆ, ವಾತಾವರಣ ಇತ್ಯಾದಿಗಳು ಜೀವನಮಟ್ಟವನ್ನು ನಿರ್ಧರಿಸುತ್ತವೆ.

ವ್ಯಕ್ತಿಯ ಜೀವನಮಟ್ಟ ಮುಖ್ಯವಾಗಿ ಅವನ ಶಿಕ್ಷಣಮಟ್ಟ ಮತ್ತು ಆರ್ಥಿಕ ಮಟ್ಟಗಳನ್ನು ಅವಲಂಬಿಸಿರುತ್ತದೆ. ಅದರಂತೆಯೇ ಒಂದು ರಾಷ್ಟ್ರದ ಜೀವನಮಟ್ಟವು ಆ ರಾಷ್ಟ್ರದ ವರಮಾನ, ಉತ್ಪಾದನೆ ಮತ್ತು ವಿತರಣೆಯ ಪದ್ಧತಿಗಳನ್ನು ಅವಲಂಬಿಸಿರುತ್ತದೆ. ಒಂದು ರಾಷ್ಟ್ರದ ಜನರ ಜೀವನಮಟ್ಟ ಹೆಚ್ಚಬೇಕಾದರೆ ರಾಷ್ಟ್ರೀಯ ಆದಾಯ ಹೆಚ್ಚಬೇಕು. ಅಷ್ಟೇ ಅಲ್ಲದೆ ಈ ಆದಾಯವು ಸರಿಯಾದ ರೀತಿಯಲ್ಲಿ ಹಂಚಿಕೆಯಾಗಬೇಕು. ರಾಷ್ಟ್ರೀಯ ಆದಾಯದ ಬಹುಭಾಗ ಶ್ರೀಮಂತರಿಗೆ ಸೇರಿದರೆ ಸಾಮಾನ್ಯ ಜನರಿಗೆ ಏನೂ ಪ್ರಯೋಜನವಾಗುವದಿಲ್ಲ. ಶ್ರೀಮಂತರು ಮತ್ತಷ್ಟು ಧನಿಕರಾದರೆ ಬಡವರು ಬಡತನದ ಕೂಪದಲ್ಲಿ ಇನ್ನಷ್ಟು ಮುಳುಗುತ್ತಾರೆ. ತಜ್ಞರ ಪ್ರಕಾರ ಭಾರತದಲ್ಲಿ ಇತರ ದೇಶಗಳೊಡನೆ ಹೋಲಿಸಿದರೆ ಬಡತನ ಉತ್ಕಟವಾಗಿದೆ. ವಿಶ್ವಸಂಸ್ಥೆಯ ವರದಿಯ ಪ್ರಕಾರ ಭಾರತದ ಪ್ರತಿ ಪ್ರಜೆಯ ಸರಾಸರಿ ವಾರ್ಷಿಕ ವರಮಾನ 60 ಡಾಲರಗಳು. ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲಿನ ಸರಾಸರಿ ವರಮಾನ 1870 ಡಾಲರ್‌ಗಳು ಮತ್ತು ಇಂಗ್ಲೆಂಡಿನ ಪ್ರತಿ ಪ್ರಜೆಯ ಸರಾಸರಿ ವರಮಾನ 780 ಡಾಲರ್‌ಗಳು. ಈ ಅಂಕಿ ಅಂಶಗಳು ಭಾರತದ ಬಡತನದ ಎಷ್ಟು ತೀವ್ರವಾದುದು ಎಂಬುದನ್ನು ತೋರಿಸುತ್ತದೆ. ಭಾರತದಲ್ಲಿ ಕೃಷಿಕಾರ್ಮಿಕರ ಸ್ಥಿತಿಗಿಂತಲೂ ಕೈಗಾರಿಕಾ ಕಾರ್ಮಿಕರ ಸ್ಥಿತಿ ಉತ್ತಮವಾಗಿದೆ. ಗ್ರಾಮೀಣ ಕಾರ್ಮಿಕರ ವಿಚಾರಣಾ ಸಮಿತಿಯ ವರದಿಯ ಪ್ರಕಾರ ಕೃಷಿಕಾರ್ಮಿಕರ ಕುಟುಂಬದ ಸರಾಸರಿ ಮಾಸಿಕ ವರಮಾನ 1964 ರಲ್ಲಿ 55 ರೂ ಗಳಿತ್ತು. ಅದೇ ವರ್ಷ ಕೈಗಾರಿಕಾ ಕಾರ್ಮಿಕರ ಆದಾಯ 140 ರೂ ಇತ್ತು. ಈ ಅಂತರದಲ್ಲಿ ಈಗಲೂ ಬದಲಾವಣೆಯಾಗಿಲ್ಲ. ಪ್ರೊ. ಎನ್. ಸಿ. ಬೋಸ್ ಎಂಬ ತಜ್ಞರ ಅಭಿಪ್ರಾಯದಲ್ಲಿ ಭಾರತದ ಬಹುಜನ ದಾರಿದ್ರ್ಯ ರೇಖೆಯ ಮಟ್ಟದಿಂದ ಕೆಳಗಡೆ ಜೀವಿಸುತ್ತಿದ್ದಾರೆ. ತೃತೀಯ ಪಂಚವಾರ್ಷಿಕ ಯೋಜನೆಯ ಅಂತ್ಯದ ವೇಳೆಗೆ ಭಾರತದ ಪ್ರತಿ ಪ್ರಜೆಯೂ ಸರಾಸರಿ ವರ್ಷಕ್ಕೆ 18 ಗಜ ಬಟ್ಟೆಯನ್ನು ಮಾತ್ರ ಉಪಯೋಗಿಸುತ್ತಿದ್ದ. ಅಮೆರಿಕಾದಲ್ಲಿ ಪ್ರತಿ ಪ್ರಜೆಯೂ ಸರಾಸರಿ ವರ್ಷಕ್ಕೆ 64 ಗಜ ಬಟ್ಟೆಯನ್ನೂ, ಇಂಗ್ಲೆಂಡಿನಲ್ಲಿ ಪ್ರತಿ ಪ್ರಜೆಯೂ 40 ಗಜ ಬಟ್ಟೆಯನ್ನೂ ಉಪಯೋಗಿಸುತ್ತಿದ್ದ. ನಮ್ಮ ದೇಶದಲ್ಲಿ ಶೇಕಡ 25 ರಷ್ಟು ಮಾತ್ರ ಪಾದರಕ್ಷೆಯನ್ನು ಧರಿಸಿದರೆ, ಇಂಗ್ಲೆಂಡ್, ಅಮೇರಿಕಾಗಳಲ್ಲಿ ಪ್ರತಿಯೊಬ್ಬನೂ ವರ್ಷಕ್ಕೆ 3 ಜೊತೆ ಪಾದರಕ್ಷೆಯನ್ನು ಉಪಯೋಗಿಸುತ್ತಾನೆ. ಈ ಕಾರಣಗಳಿಂದಾಗಿ ಭಾರತದ ಜನರ ಜೀವನಮಟ್ಟ ವಿಶ್ವದಲ್ಲೆಲ್ಲಾ ಅತಿ ಕೆಳಮಟ್ಟದೆಂದು ಭಾವಿಸಲಾಗಿದೆ. ಭಾರತದಲ್ಲಿ ಜನರ ಜಿವನಮಟ್ಟವನ್ನು ಹೆಚ್ಚಿಸಲು ನಿರಂತರವಾಗಿ ಶ್ರಮಿಸಲಾಗುತ್ತಿದೆ. ಇದರ ಫಲವಾಗಿ ರಾಷ್ಟ್ರದ ಆದಾಯ, ಜನಸಾಮಾನ್ಯರ ಸರಾಸರಿ ಆದಾಯ ಹೆಚ್ಚುತ್ತಿದೆ. ಆದಾಗ್ಯೂ ಅವು ಜೀವನಮಟ್ಟದ ಮೇಲೆ ಹೆಚ್ಚಿನ ಪ್ರಭಾವ ಬೀರುತ್ತಿಲ್ಲ. ಅಲ್ಲದೆ ಏರುತ್ತಿರುವ ಜನಸಂಖ್ಯೆಯು ಜೀವನಮಟ್ಟದ ಕುಸಿತಕ್ಕೆ ಕಾರಣವಾಗಿದೆ. ಈ ದಿಸೆಯಲ್ಲಿ ಎರಡು ಬಗೆಯ ಕಾರ್ಯಕ್ರಮಗಳು ಅಗತ್ಯ.

1 ಜನಸಾಂದ್ರತೆ ಮತ್ತು ಜನಸಂಖ್ಯೆಯ ಬೆಳವಣಿಗೆಯ ವೇಗವನ್ನು ಕಡಿಮೆಮಾಡುವುದು.

2 ದೇಶದಲ್ಲಿ ಆರ್ಥಿಕಾಭಿವೃದ್ಧಿಯ ವೇಗವನ್ನು ಹೆಚ್ಚಿಸಿ ಉತ್ಪನ್ನವನ್ನು ಅಧಿಕಗೊಳಿಸಿ, ಹಂಚಿಕೆಯಲ್ಲಿನ ಅಸಮತೆಯನ್ನು ನಿವಾರಣೆಮಾಡುವುದು.

ಇದರ ಜೊತೆಗೆ ಹಳ್ಳಿಗರ ಸ್ಥಿತಿಗತಿಗಳನ್ನು ಉತ್ತಮಗೊಳಿಸಲು ಕಾರ್ಯಕ್ರಮಗಳನ್ನು ರೂಪಿಸಬೇಕು. ಅವರ ಬಾಳಿನಲ್ಲಿ ತುಂಬಿರುವ ಅಜ್ಞಾನದ ಕತ್ತಲೆಯನ್ನು ದೂರಮಾಡಬೇಕು. ಜೀವನವನ್ನು ಯೋಗ್ಯರೀತಿಯಲ್ಲಿ ನಡೆಸಲು ಅಗತ್ಯವಾದ ಅನ್ನ, ಆವಶ್ಯಕವಾದ ಔಷಧೋಪಚಾರ, ಮೈಮುಚ್ಚಿಕೊಳ್ಳಲು ಮಾತ್ರವಲ್ಲದೆ ಕಲೆ-ಚೆಲುವುಗಳನ್ನು ತೋರಿಸುವಂತಹ ಬಟ್ಟೆ, ಒಳಗಿನ ಶಕ್ತಿಯನ್ನು ಹೊರಗೆಳೆದು ಬಾಳನ್ನು ಬೆಳಗಿಸುವ ಶಿಕ್ಷಣ, ಕೌಶಲವನ್ನು ಹೊರಹೊಮ್ಮಿಸುವ ಸ್ವಭಾವಾನುಗುಣವಾದ ಕೆಲಸ, ವ್ಯಕ್ತಿ-ಸಮಾಜ ಈ ಎರಡೂ ದಾರಿಯಲ್ಲಿ ಪ್ರಗತಿಯನ್ನು ಸಾಧಿಸಬಲ್ಲಂತಹ ಸಾಧನಗಳು-ಇವೆಲ್ಲವನ್ನೂ ಅವರಿಗೆ ಒದಗಿಸಬೇಕು.

ಗ್ರಾಮಗಳ ಉದ್ಧಾರದಮೇಲೆ ನಮ್ಮ ದೇಶದ ಅಭ್ಯುದಯ ನಿಂತಿದೆ. ಎನ್ನುವುದನ್ನು ನಾವು ಮರೆಯುವಂತಿಲ್ಲ. ದೇಶದ ಅಭ್ಯುದಯವಾದಂತೆ ಜನಸಂಖ್ಯೆಯ ವೇಗ ಕುಗ್ಗುತ್ತದೆ ಎಂದು ಅಭಿಪ್ರಾಯಪಡಲಾಗಿದೆ. ಈ ಅಭಿಪ್ರಾಯ ಸರಿ ಎನ್ನಲೂ ಬಹುದು. ಹೇಗೆಂದರೆ ಪ್ರಗತಿಪರ ರಾಷ್ಟ್ರಗಳಾದ ಅಮೇರಿಕಾ, ಇಂಗ್ಲೆಂಡ್ ಮತ್ತಿತರ ದೇಶಗಳಲ್ಲಿ ಜನಸಂಖ್ಯೆಯ ಪ್ರಮಾಣ ಕುಗ್ಗುತ್ತಾ ಬಂದಿದೆ. ಜನಸಂಖ್ಯೆಯ ಕುಗ್ಗುವಿಕೆಯು ಮತ್ತೊಂದು ಕಾರಣದಿಂದಲೂ ಉಂಟಾಗಬಹುದು. ಅದೇಂದರೆ, ಗ್ರಾಮೀಣಾ ಕ್ಷೇತ್ರಗಳಿಂದ ನಗರ ಕ್ಷೇತ್ರಗಳಿಗೆ ಉದ್ಯೋಗಗಳಿಗಾಗಿ ವಲಸೆ ಹೋಗುವುದು. ಇದಕ್ಕೆ ನಗರವಾಸಿಗಳಿಗೆ ಹೆಚ್ಚಿನ ಮಕ್ಕಳನ್ನು ಪಡೆಯುವ ಉತ್ಸುಕತೆ ಇರುವುದಿಲ್ಲ. ಆದರೆ ಈಗ ಎರಡು ದಶಕಗಳಿಂದ ಭಾರತದಲ್ಲಿ ಆರ್ಥಿಕಾಭಿವೃದ್ಧಿಯಾಗುತ್ತಿದ್ದರೂ, ನಗರವಾಸಿಗಳ ಸಂಖ್ಯೆ ಹೆಚ್ಚುತ್ತಿದ್ದರೂ ಜನಸಂಖ್ಯೆ ಅಧಿಕಗೊಳ್ಳುತ್ತಲೇ ಇರುವುದು. ಜನಸಂಖ್ಯೆ ಅಧಿಕಗೊಂಡಂತೆಲ್ಲಾ ನಿರುದ್ಯೋಗ ಹೆಚ್ಚಿ ಉಳಿತಾಯ ಕಡಿಮೆಯಾಗುತ್ತಿದೆ. ಇದರ ಫಲವಾಗಿ ಆರ್ಥಿಕಾಭಿವೃದ್ಧಿ ಕುಂಠಿತಗೊಂಡು ವರಮಾನ ಬೆಳೆಯುವ ವೇಗ ತಗ್ಗುತ್ತದೆ. ಪ್ರತಿ ಪ್ರಜೆಯ ಸರಾಸರಿ ವರಮಾನ ಕಡಿಮೆಯಾಗಿ ಜೀವನಮಟ್ಟ ಮತ್ತಷ್ಟು ಕುಗ್ಗುತ್ತದೆ. ಈ ದೃಷ್ಟಿಯಿಂದ ಜನನ ನಿಯಂತ್ರಣ ಮತ್ತು ಕುಟುಂಬ ಯೋಜನೆಯನ್ನು ಎಲ್ಲಾ ಜನಾಂಗದವರೂ ಅನುಸರಿಸುವಂತೆ ಕಾಯಿದೆಗಳನ್ನು ರೂಪಿಸಿ ಕಾರ್ಯರೂಪಕ್ಕೆ ತರುವುದು ಅನಿವಾರ್ಯ ಎಂದು ತೋರುತ್ತದೆ. ಜನಸಂಖ್ಯೆಯನ್ನು ತಡೆಗಟ್ಟದಿದ್ದಲ್ಲಿ ನಮ್ಮ ದೇಶದ ಜನರ ಜೀವನಮಟ್ಟವನ್ನು ಸುಧಾರಿಸಲಾಗುವುದಿಲ್ಲ.

ಪಾಶ್ಚಿಮಾತ್ಯರು ಕೇವಲ ಜೀವನಮಟ್ಟದ ಆಧಾರದಿಂದ ಭಾರತ ಹಿಂದುಳಿದ ದೇಶವೆಂದು ಹೇಳುತ್ತಿದ್ದಾರೆ. ಪಾಶ್ಚಾತ್ಯಪದ್ಧತಿ ಉನ್ನತ, ನಮ್ಮದು ಕೀಳು ಎಂದು ನಾವು ಅಭಿಪ್ರಾಯ ಪಡುತ್ತೇವೆ. ಆದರೆ ವಿಚಾರಿಸಿ ನೋಡಿದಲ್ಲಿ ಇದು ತಪ್ಪು ಎನಿಸುತ್ತದೆ. ನಮ್ಮದು ಸರಳ, ಅವರದು ಆಡಂಬರ ಎಂದರೆ ಸರಿಯಾಗುತ್ತದೆ. ಇಂದು ಸ್ಪರ್ಧೆಯಿಂದ ಆಡಂಬರದ ಸಂಪ್ರದಾಯಗಳು ಹೆಚ್ಚುತ್ತಿವೆ. ಇದರಿಂದ ಮಾನವೀಯತೆಯ ಮಟ್ಟ ಇಳಿಯುತ್ತಿದೆ. ಇಂದಿನ ಆಧುನಿಕ ಯುಗದಲ್ಲಿ ನಾವೆಲ್ಲರೂ ಒಬ್ಬರಿಗೊಬ್ಬರು ಸಂಬಂಧಿಸಿದ್ದೇವೆ. ಆದ್ದರಿಂದ ಸಮಾಜದ ನಾನಾಭಾಗಗಳಲ್ಲಿ ಸಹಕಾರ ಪೂರ್ಣ ಸಾಮರಸ್ಯತಂದು ಎಲ್ಲಾ ಒಂದೇ ಜೀವ ಎಂಬಂತೆ ನಡೆಯಲು ಅನುಕೂಲವಾಗುವ ರೀತಿಯಲ್ಲಿ ಇರಬೇಕು. ಜೀವನಕ್ರಮ, ಜೀವನಮಟ್ಟ, ಇಡೀ ಸಮಾಜವನ್ನು ಒಂದಾಗಿ ಕಟ್ಟುವ ವಿಶ್ವಾಸ-ಅನ್ಯೋನ್ಯತೆಗಳಸಿದ್ಧಿಗಾಗಿ ನಮ್ಮ ಜೀವನಮಟ್ಟ ರೂಪಿತವಾಗಬೇಕು. ಆಗ ಪರಸ್ಪರ ವಿಶ್ವಾಸ, ಒಗ್ಗಟ್ಟು, ಸುಖ ಲಭಿಸುತ್ತದೆ. ಅದರಿಂದ ಸಮಾಜಕ್ಕೇ ಬಲ ಬರುತ್ತದೆ. ಹತ್ತಿಯ ತೊಳೆಯ ಒಂದೊಂದು ನಾರೂ ದುರ್ಬಲವೇ ಆದರೂ ಅದನ್ನೇ ಸಾವಿರಾರು ಎಳೆಗಳಾಗಿ ಒಟ್ಟುಗೂಡಿಸಿ ನೂತರೆ, ಆ ಧಾರವನ್ನು ಹೊಸೆದು ಹಗ್ಗ ಮಾಡಿದರೆ, ಎಂತಹ ಭಾರಿ ಹಡಗನ್ನಾದರೂ ಅದು ತಡೆದು ನಿಲ್ಲಿಸುತ್ತದೆ. ತೃಪ್ತಿಕರವಾದ ಜೀವನಮಟ್ಟದಿಂದ ಬರುವ ಫಲ ಇಂತಹುದಾಗಬೇಕು. ಆಗಲೇ ರಾಷ್ಟ್ರದ ಆರ್ಥಿಕಾಭಿವೃದ್ಧಿ ಸ್ಥಿರವಾಗಿ, ಶಾಶ್ವತವಾಗಿ ಮಾರ್ಪಡಲು ಸಾಧ್ಯ.

---

## ತಾಯಿ — ಮಗು

—ಕೆ. ವಿರೂಪಾಕ್ಷಗೌಡ—

ಗಿರಣಿ ಕೂಗುವ ಮೊದಲು ಮೊಲೆಯ ಕುಡಿದುದ ಸ್ಮರಿಸಿ
ಎತ್ತಿಕೋ ಓ! ಕೂಸು ಗೋಳಿಡುತಿದೆ
ಹರಿದ ಕುಬುಸದಿ ತೂರಿ ಹಾಲುಳ್ಳ ಎರಡು ಮೊಲೆ
ಹಾಲು ಕುಡಿಸಲು ಪಾಪ ಹೊರಬಂದಿವೆ
ನೀರ್ಗಿ ಕಚ್ಚೆಯ ಬಿಚ್ಚಿ ಸೀರೆ ಸೆರಗನು ತೊಡವಿ
ಹರಿದ ಸೀರೆಯನುಟ್ಟು ಕೆಲಸದಿಹಳು.

## ಶುದ್ಧ ಕಾಂಗ್ರೆಸ್ಸಿನ ಶುದ್ಧ ಪತ್ರಿಕೆ

ಶುದ್ಧ ಖಾದೀದಾರಿ ಶುದ್ಧ ಕಾಂಗ್ರೇಸಿಗರು
ದೇಶಭಕ್ತರು, ಬಹಳ ಪರಿಶುದ್ಧರು!
ನಮ್ಮ ಸೀಮೆಯ ಒಂದು ಪತ್ರಿಕೆ
ಹೊತ್ತು ತಂದಿತು ಪರಿಚಯ
ಬಾಲ ಬಡಿಯುದ ಸ್ವೇಚ್ಛೆ ಪತ್ರಿಕೆ
ಮಸಿಯಿ ಬಳಿಯಿತು ನಿಶ್ಚಯ.



## ಕಾವ್ಯವಾಹಿನಿ



## ಇದ್ದೂ ಇಲ್ಲದವರು

—" ಆನಂದಾಗರ "

ಸ್ವಾಮೀsss...............................
ಜನನೀ ಜನ್ಮ ಭೂಮಿ!
ಈ ತಾಯ ವರಪುತ್ರರಲ್ಲವೇ ನಾವು?
' ವರ ' ವೆಲ್ಲ ನಿಮ್ಮ ಕರವಶವಾಗಿ
ಹುಟ್ಟೂರ ಗಟ್ಟಿಗರು ನೀವು!
ನೊಂದವರು ನಾವಿಂದು ಹೀಗಿದ್ದೇವೆ,
ಇಷ್ಟಕ್ಕೆ ನಿಂತಿತೇ ನೋವು?
ಇಲ್ಲ, ಪೌರುಷದ ಹರುಷದಲಿ
ಪ್ರಭುತ್ವದ ಮದಮತ್ತ ಪರಿಹಾಸದಲಿ
ಕೆಡಹಿ ಗುಡಿಹಂದರಗಳ ಹುಡಿಗೈದು,
ಪುಡದಿ ಮಕ್ಕಳ ಸದೆಬಡಿದು
ಏರಿಸಿದ್ದೀರಿ ಮನೆ ಮಂದಿರಗಳ ಸಾಲು
( ಕೂರಿಸಿದ್ದೀರಿ ದೇವನೆನುವ ಕಲ್ಲು )
ಮುಗಿಯಿತೇ ದಾಹ?
ಮುಂದಕೂ ನಡೆಸಿತ್ತು ಮೃಗಯಾವಿಹಾರ,
ರಣಚಂಡಿಯ ಕರಾಳ ಪ್ರಹಾರ,
ಕಾಲ್ಗೆರಗಿ, ಕೈಯೊಡ್ಡಿ
ಕರುಣೆ ಭಿಕ್ಷೆಯ ಬೇಡಿ
ಬಸವಳಿದಾಗ ನಮ್ಮೆದೆಗಳ ಮೇಲೆ ನಿಮ್ಮೊದೆತಗಳ ಸದ್ದು,
ನೆತ್ತಿಯನು ಕುತ್ತಿ,
ಕತ್ತನ್ನು ಕಡಿದು,
ನೆತ್ತರನೆ ಕುಡಿದು,
ಮೂಳೆಗಳ ಮುರಿದು
ಎಸೆದಂದೆ ಹರಡಿತ್ತು ಕೆಂಪು ಛಾಯೆಯ ಪರಧಿ,
ಬಿದ್ದಲ್ಲೆ ಎದ್ದಿತ್ತು ಸಮಾಧಿ,
ಕಂಡಂತೆ ಕಣ್ಮುಚ್ಚಿ ಕೂತನೇ ಕಪಟವಿಧಿ?

ಒಡೆಯ ಒಡನಾಡಿಗಳಲ್ಲವೇ ನಾವು ನೀವು?
ಆಡಿದೊಲು ಬಂದೊದಗಿದೆ ಸಾವು!
ಈಸೊಂದು ಗೈದವರು ಲೇಸೊಂದನೆಸಗುವಿರೆ?
ಸಿಗುವಂತೆ ಉನ್ಮತ್ತ ಆತ್ಮಕ್ಕೆ ಶಾಂತಿನೆಲೆ,
ಹುತ್ತ-ಗೋರಿಯ ಮೇಲೆ,
ನಮ್ಮ ರಕ್ತೆಲುಬುಗಳಲ್ಲೇ
ಈ ಮೂರು ಶಬ್ದಗಳ ಮಾಲೆ
ಜೋರಾಗಿ ಬರೆದು ಬಿಡಿ:
ಇದ್ದೂ ಇಲ್ಲದವರು
ಈಗಿಲ್ಲಿದ್ದಾರೆ!

---

## ಬಡತನ — ಸಿರಿತನ

—ಕೆ. ವಿರೂಪಾಕ್ಷಗೌಡ

ಬಡತನದ ಎಣ್ಣೆಯಿದೆ ಪ್ರಣತಿಯಲ್ಲಿ
ಸಿರಿತನದ ಬತ್ತಿ ಅದೋ ಉರಿ ಹುರಿಯಲಿ
ಎಣ್ಣೆ ಬತ್ತುತ್ತಿದೆ ಬತ್ತಿ ಇದ್ದಂತಿದೆ
ಎಣ್ಣೆ ಬತ್ತಿರೆ ಮುಂದೆ ಬೆಳಕೆಲ್ಲಿದೆ?

# ಬೃಹತ್ ವಿಸ್ಮಯಗಳು

—ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

**ರಾಕ್ಷಸ ಮರಗಳು**

ಗಗನಕ್ಕೇರಿರುವ ಬೃಹದಾಕಾರದ ರಾಕ್ಷಸ "ಸೆಕ್ವಾಯಾ ಮರಗಳು" ಪೃಥ್ವಿಯ ಮರಗಳಲ್ಲೆಲ್ಲ ಅತ್ಯಂತ ದೊಡ್ಡ ಗಾತ್ರದವು ಮತ್ತು ಎತ್ತರವಾದವು. ಅವು ಅಮೆರಿಕದ ಕ್ಯಾಲಿಫೋರ್ನಿಯಾ ಪ್ರಾಂತದ ಪರ್ವತಗಳಲ್ಲಿ ಸಮುದ್ರಮಟ್ಟದಿಂದ 5000-6000 ಅಡಿ ಎತ್ತರದಲ್ಲಿ 250 ಮೈಲಿ ಉದ್ದವಿರುವ 20 ತೋಪುಗಳಲ್ಲಿ ಬೆಳೆದಿದೆ. ಅವುಗಳ ಎತ್ತರ 250-300 ಅಡಿಗಳು; ಸುತ್ತಳತೆ 1012 ಅಡಿ; ಬುಡದ ಅಡ್ಡಳತೆ 36½ ಅಡಿ; ತೂಕ 6167 ಟನ್. ಗಾತ್ರ ಎಷ್ಟು ಅಗಾಧವೆಂದರೆ ಅದರ ಮುಂಡದಿಂದ ಐದು ಲಕ್ಷ ಅಡಿಗಳಿಗಿಂತಲೂ ಹೆಚ್ಚು ಉದ್ದದಷ್ಟು ಹಲಗೆಗಳನ್ನು ತಯಾರಿಸಬಹುದು. ಒಂದೊಂದು ಮನೆಯಲ್ಲೂ 5 ಕೊಠಡಿಗಳಂತೆ 40 ಮನೆಗಳನ್ನು ಆ ಒಂದೇ ಹಲಗೆಯಿಂದ ಕಟ್ಟಲು ಸಾಧ್ಯ. ಕೆಲವು ಮರಗಳು 350-400 ಅಡಿಗಳೆತ್ತರ ಬೆಳೆದಿವೆ. ಮರದ ತೊಗಟೆಯ ದಪ್ಪ ಎರಡು ಅಡಿ. ಮರದ ಕೊಂಬೆಯ ಮೇಲೆ ಒಬ್ಬಾತ ಅಡ್ಡಲಾಗಿ ಮಲಗಲು ಸಾಧ್ಯ. ಅದರ ವ್ಯಾಸ ಏಳು ಅಡಿಗಳು. ಕೆಲವು ಮರಗಳಿಗೆ 4000 ವರ್ಷಗಳಿಗಿಂತಲೂ ಹೆಚ್ಚು ವಯಸ್ಸು; ಕೆಳಗೆ ಬಿದ್ದಿರುವ ಒಂದು ಮರದಲ್ಲಿ ಅಶ್ವಾರೂಢನಾದ ಒಬ್ಬ ವ್ಯಕ್ತಿ ಸವಾರಿಮಾಡುತ್ತಾ ಕುದುರೆಯೊಡನೆ ಹಾಯ್ದುಕೊಂಡು ಹೋಗುವಷ್ಟು ಹಾದಿಯಿದೆ. ಇನ್ನೊಂದು ಮರದ ಬುಡದಲ್ಲಿ ಮೋಟಾರ್-ಬಸ್‌ಗಳು ಹೋಗಲು ಮಾರ್ಗವನ್ನು ಕೊರೆದಿದೆ. ಮತ್ತೊಂದು ಮರದ ಕೊರಡಿನ ಮೇಲೆ ನೃತ್ಯ ಗದ್ದಿಗೆಯನ್ನು ಮಾಡಿ ಅದರ ಮೇಲೆ 40ಕ್ಕಿಂತಲೂ ಹೆಚ್ಚು ಜನರು ನರ್ತಿಸುತ್ತಾರೆ. ಇನ್ನೊಂದು ಮರದ ಬುಡವನ್ನು ಕೊರೆದು ಅನೇಕ ಕುದುರೆಗಳನ್ನು ಕಟ್ಟಲು ಒಂದು ಲಾಯವನ್ನು ಮಾಡಲಾಗಿದೆ. ಮತ್ತೊಂದರಲ್ಲಿ ಭಾರಿ ಔತಣದ ಕೂಟಕ್ಕೆ ತಕ್ಕ ಸಭಾಂಗಣವನ್ನು ಕೊರೆದಿದೆ.

**ಪೃಥ್ವಿಯ ಅತ್ಯಂತ ದೊಡ್ಡ ದೂರದರ್ಶಕ**

ಕ್ಯಾಲಿಫೋರ್ನಿಯಾದಲ್ಲಿರುವ ಮೌಂಟ್ ಪಾಲೊಮಾರ್ ಎಂಬ ನಕ್ಷತ್ರಶಾಲೆಯಲ್ಲಿ 200 ಅಂಗುಲ ವ್ಯಾಸಹ $3\frac{1}{2}$ ಕೋಟಿ ರೂಪಾಯಿ ಬೆಲೆಬಾಳುವ ದೂರದರ್ಶಕವು ಸ್ಥಾಪಿತವಾಗಿದೆ. ಅದನ್ನಿಟ್ಟಿರುವ ಗುಮ್ಮಟವು 137 ಅಡಿ ಎತ್ತರವಿದೆ. ಈ ಯೋಜನೆಯನ್ನು ಮುಗಿಸಲು 22 ವರ್ಷಕಾಲ ಹಿಡಿಯಿತು. 18 ಟನ್ ಭಾರವೂ, 20,000 ಚದುರಂಗುಲ ಅಂಗಣವೂ ಉಳ್ಳ ಈ ರಾಕ್ಷಸ ಕನ್ನಡಿಯನ್ನು ಬಹು ಸೂಕ್ಷ್ಮವಾಗಿ ಸಾಣೆಹಿಡಿಯಲು ಬಹು ಚಾತುರ್ಯವೂ, ಪ್ರವೀಣತೆಯೂ ಪ್ರಯೋಗವಾದವು, ಚಪ್ಪಟೆಯಾಗಿದ್ದ ಮೂಲಗಾಜಿನ ಅಸಿಗಲ್ಲನ್ನು ಗೋಲಾಕಾರಕ್ಕೆ ರೂಪಿಸಲು ಮೊದಲನೇ ಸಾರಿ ತಿಕ್ಕಿ ತೆಗೆದ ಗಾಜಿನ ತೂಕವೇ ಐದು ಟನ್ ಆಯಿತು. 1/10,000 ಅಂಗುಲಕ್ಕಿಂತಲೂ ಹೆಚ್ಚು ವ್ಯತ್ಯಾಸ ಬರಕೂಡದ್ದರಿಂದ ಹಸ್ತಕೌಶಲವು ಬಹು ಸಮಂಜಸವಾಗಬೇಕಾಗಿತ್ತು. ಈ ದೂರದರ್ಶಕವು ಎಷ್ಟು ಪ್ರಚಂಡವಾಗಿದೆಯೆಂದರೆ, ಬರೀ ಕಣ್ಣಿಗೆ ಮಂಕಾಗಿ ಕಾಣುವ ನಕ್ಷತ್ರ ಏಳು ಲಕ್ಷ ಪಟ್ಟು ಪ್ರಕಾಶವಾಗಿ ಕಾಣಿಸುತ್ತದೆ. ಮೋಂಬತ್ತಿಯ ದೀಪದಷ್ಟು ಮಂದವಾಗಿ 40,000 ಮೈಲಿ ದೂರದಲ್ಲಿರುವ ವಸ್ತುವನ್ನು ಫೋಟೋ ತೆಗೆಯಲು ಸಾಧ್ಯ. ಈ ದೂರದರ್ಶಕವು ಕೋಟಿ ಕೋಟಿ ಹೊಸ ಜಗತ್ತುಗಳ್ನು ತೋರಿಸಿ 12,000,000,000,000,000,000,000 ಮೈಲು ದೂರದ ನಕ್ಷತ್ರಗಳನ್ನೂ ಪತ್ತೆ ಮಾಡಿದೆ.

**ದೈತ್ಯ ಬೇಲಿ**

ಆಸ್ಟ್ರೇಲಿಯದಲ್ಲಿ 16 ಕೋಟಿ ಕುರಿಗಳಿವೆ. "ಡಿಂಗೊ" ಎಂಬ ಬಹು ಕ್ರೂರ ಕಾಡುನಾಯಿಗಳು ಕುರಿಗಳನ್ನು ನಾಶಮಾಡತೊಡಗಿದವು. ಹತ್ತು ವರ್ಷಗಳಲ್ಲಿ ಕ್ವೀನ್ಸ್‌ಲ್ಯಾಂಡ್ ಜಿಲ್ಲೆಯೊಂದರಲ್ಲೇ ಆರು ಲಕ್ಷಕ್ಕೂ ಹೆಚ್ಚು ಕುರಿಗಳನ್ನು ಕೊಂದವು. ಆಗ ಸಾವಿರಗಟ್ಟಲೆ ನಾಯಿಗಳನ್ನು ಬೇಟೆಯಾಡಿ ಕೊಂದರೂ ಅವುಗಳನ್ನು ನಿರ್ಮೂಲ ಮಾಡಲಾಗಲಿಲ್ಲ. ಪ್ರಾಂತ ಸಿರಕಾರಗಳೂ



# ಮಾತುಕತೆ

— ಬಿ. ಸುಬ್ರಾಯ ಅಡಿಗ

ನನ್ನ ಸಂಗಾತಿ ಪ್ರಮೋದ ಬಣ್ಣ ತಯಾರಿಕೆಯ ಕಾರ್ಖಾನೆಯೊಂದರಲ್ಲಿ ಕ್ಲಾರ್ಕ್. ಕಂಪೆನಿಯ ಅಕೌಂಟ್ ವಿಭಾಗ ಪ್ರತಿಯೊಬ್ಬ ಕೆಲಸಗಾರನಿಗೂ ತಿಂಗಳ ಕೊನೆಗೆ ಸಂಬಳದ ಚೀಟಿ ಕೊಡುತ್ತಿತ್ತು. ಅದನ್ನು ತೋರಿಸಿದರೆ ಸಂಬಳ ಸಿಗುತ್ತಿತ್ತು.

ಒಂದುಸಲ ತಪ್ಪಿನಿಂದ ಪ್ರಮೋದನ ಸಂಬಳದ ಚೀಟಿಯಲ್ಲಿ ೩೮೦ ರೂಪಾಯಿಗೆ ಬದಲು ೩—೨೦ ರೂಪಾಯಿ ಬರೆದಿತ್ತು.

ಇದನ್ನು ಕಾಣುತ್ತಲೇ ಪ್ರಮೋದ ಸಿಡಿಮಿಡಿಗೊಂಡ. ಆತ ಓಡುತ್ತೋಡುತ್ತ ಅಕೌಂಟೆಂಟನ ಬಳಿಗೆ ಬಂದು – 'ನನ್ನ ಸಂಬಳದಲ್ಲೇಕೆ ಕಡಿತ ಮಾಡಿದಿರಿ? ಇದೇನು ತಮಾಷೆ? ಈ ದುಬಾರಿ ವೇಳೆಯಲ್ಲಿ ನೀವು ಬಡ ಕೆಲಸಗಾರರ ಕೊರಳು ಕೊಯ್ಯುತ್ತೀರಲ್ಲಾ? ನಾಚಿಕೆಯಾಗುವುದಿಲ್ಲವೆ ನಿಮಗೆ ಇಂಥ ಕೆಲಸ ಮಾಡುವುದಕ್ಕಿಂತ...............' ಎಂದು ಇನ್ನೂ ಏನೇನೋ ಹೇಳಲಿದ್ದ.

"ಸುಮ್ಮನಿರಿ........ಮೊದಲು ಆ ಚೀಟಿಯನ್ನು ನೋಡಿ ನನಗೆ"—ಎಂದ ಅಕೌಂಟೆಂಟ್.

ಚೀಟಿನೋಡಿ, ಪ್ರಮೋದನ ಸಂಬಳದಲ್ಲಿ ಯಾವುದೇ ಕಡಿತವಾಗಿಲ್ಲವೆಂದೂ ಟೈಪಿಂಗ್ ತಪ್ಪಿನಿಂದಾಗಿ ಹಾಗೆ ಆಗಿದೆಯೆಂದೂ ಹೇಳಿದ ಅಕೌಂಟೆಂಟ್.

ಈಗ ಪ್ರಮೋದ ತಣ್ಣಗಾದ. 'ತಪ್ಪಾಯಿತು, ಕ್ಷಮಿಸಿ'—ಎಂದ. ಹೋಗಲಿ, ಬಿಡಿ ....... ನೀವು ನಿಮ್ಮ ದೊಡ್ಡಸ್ತಿಗೆಯನ್ನು ತೋರಿಸಿಬಿಟ್ಟಿರಲ್ಲಾ'—ಎಂದು ವ್ಯಂಗವಾಗಿ ನುಡಿದ ಅಕೌಟೆಂಟ್.

ಸಂಜೆ ಪ್ರಮೋದ ಮನೆಗೆ ಬಂದು ಈ ಘಟನೆಯನ್ನು ನನಗೆ ಹೇಳಿ— 'ನನ್ನ ಬಗ್ಗೆ ಅಕೌಂಟೆಂಟನ ಅಭಿಪ್ರಾಯ ಬದಲಾಗಿರಬಹುದು. ನಾನು ತುಂಬ ಯೋಗ್ಯನೆಂದು ಆತ ಭಾವಿಸಿದ್ದ, ಎಷ್ಟೋ ಸಲ ಸ್ವತಃ ಜಾಮೀನು ನಿಂತು ನನಗೆ ಮುಂಗಡ ಹಣ ಕೊಡುತ್ತಿದ್ದ ಈಗ ನನ್ನ ಮೇಲಿನ ಅವನ ವಿಶ್ವಾಸ ಹಾರಿಹೋಗಿರಬಹುದು'—ಎಂದು ವಿಷಾದಿಸಿದ.

ಸಿಟ್ಟಿನ ಪರಿಣಾಮವೇ ಹೀಗೆ!

ಪ್ರಮೋದ ಸಭ್ಯರೀತಿಯಿಂದ ಅಕೌಂಟೆಂಟ್ ನೊಡನೆ ಮಾತುಕತೆ ನಡೆಸಿ ನಿಜಸ್ಥಿತಿ ಅರಿಯಲೆತ್ನಿಸಿದ್ದರೆ, ಅಕೌಂಟೆಂಟನಿಗೆ ತನ್ನ ವಿಭಾಗದ ತಪ್ಪು ಅರಿವಾಗಿ ಅವನೇ ಆ ಬಗ್ಗೆ ವಿಷಾದಿಸುತ್ತಿದ್ದ; ಕ್ಷಮೆಕೂಡ ಬೇಡುತ್ತಿದ್ದ. ಆಗ ಅವರ ಮಧುರ ಸಂಬಂಧಕ್ಕೆ ಒಂದಿಷ್ಟೂ ಧಕ್ಕೆ ಉಂಟಾಗುತ್ತಿರಲಿಲ್ಲ.

ನಮ್ಮ ಸಾಮಾಜಿಕ ಜೀವನದಲ್ಲೂ ಇಂಥ ಘಟನೆಗಳು ಆಗಾಗ್ಗೆ ಘಟಿಸಬಹುದು. ಇತರರ ಮೇಲೆ ಸಿಡಿದೆದ್ದು ಸ್ವಚ್ಛಂದವಾಗಿ ಅವರನ್ನು ಬಯ್ಯಲು ಮನಸ್ಸಾಗಬಹುದು. ಆವೇಶ ಒಂದು ನಿಮಿಷ ಈ ಭಾವವನ್ನು ಹತ್ತಿಕ್ಕಿ ಶಾಂತಿಯಿಂದ ವಿಚಾರ ಮಾಡಬೇಕು. ಇದರ ಫಲಿತಾಂಶ ಏನಾದೀತೆಂದು ಲೆಕ್ಕ ಹಾಕ್‌ಬೇಕು.

ಇದರಿಂದ ಆ ವ್ಯಕ್ತಿ ನಮ್ಮಬಗ್ಗೆ ಸಹಾನುಭೂತಿ ತಳೆಯುವನೆ? ಅವನ ದೃಷ್ಟಿಯಲ್ಲಿ ನಾವು ಮೇಲೇರಬಲ್ಲವೆ? ನಮ್ಮ ಕೆಲಸ ಪೂರೈಸುವುದೆ?

ಈ ಮೂರಕ್ಕೂ ದೊರೆಯುವ ಒಂದೇ ಒಂದು ಉತ್ತರ—"ಇಲ್ಲ, ಸರ್ವಥಾ ಇಲ್ಲ!"

ಇತರರನ್ನು ಬೈದು ಭಂಗಿಸಿ ಇಲ್ಲವೇ ಅಪಮಾನಗೊಳಿಸಿ ನಮಗೇನೂ ಲಾಭ ಸಿಗುವಂತಿಲ್ಲ—ಎಂಬುದು ಒಂದು ಸಾಮಾನ್ಯ ಮನೋವಿಜ್ಞಾನ.

**ವಿವಾಹದ ಉತ್ತಮ ಪರಿಹಾರ**

ಆದ್ದರಿಂದ ವಿವಾದ ಇಲ್ಲವೇ ಜಗಳವನ್ನು ಪರಿಹರಿಸುವ ಸರ್ವೋತ್ತಮ ಉಪಾಯವೆಂದರೆ ಶಾಂತಿಪೂರ್ವಕವಾದ ಮಾತುಕತೆ.

ಎಷ್ಟೇಸಲ ನಮ್ಮ ಮನದಲ್ಲಿ ಮಾತುಕತೆಯ ಮೂಲಕ ವಿವಾದವನ್ನು ಬಗೆಹರಿಸುವ ವಿಚಾರ ಮೂಡುತ್ತದೆ. ಆದರೆ ಇದನ್ನು ಯಾರು ಆರಂಭಿಸಬೇಕು—ಎಂಬುದೇ ಸಮಸ್ಯೆಯಾಗುತ್ತದೆ.

ಆದರೆ ಇಂಥ ದೃಷ್ಟಿಕೋಣದಿಂದ ಕೆಲಸ ನೆರವೇರುವುದಿಲ್ಲ; ತಲೆನೋವು ತಗ್ಗುವುದಿಲ್ಲ. ಪರಸ್ಪರ

ಭೇಟಿ ನಡೆಯದೆ ನಿಮ್ಮೊಡನೆ ವ್ಯವಹರಿಸಿದವರಿಗೆ ಲಕ್ಷಾಂತರ ರೂಪಾಯಿ ನಷ್ಟ ಸಂಭವಿಸಬಹುದೆನ್ನಿ. ಆಗ ನಿಮಗೂ ಸಾವಿರ, ೨ ಸಾವಿರ ರೂಪಾಯಿ ನಷ್ಟವಾಗದಿದ್ದೀತೆ ?

ಆದ್ದರಿಂದ ಪ್ರತಿಷ್ಠೆಯ ಒಣಜಂಭವನ್ನು ಬದಿಗೊತ್ತಿ ನೀವೇ ಮಾತುಕತೆಗೆ ಮುಂದಾದರೆ ತಪ್ಪೇನು ?

ವ್ಯವಸಾಯಕ ಪತ್ರವ್ಯವಹಾರದಲ್ಲಿ ನಾವು ನಮ್ಮ ವೈಯಕ್ತಿಕ ವಿಚಾರಗಳನ್ನು ಬರೆಯುವುದಿಲ್ಲ. ಹೀಗೆ ನಮ್ಮ ಅಸಹಾಯಕತೆಯನ್ನು ತೋರ್ಪಡಿಸಲಾರೆವು.

ನನ್ನೊಬ್ಬ ವ್ಯಾಪಾರಿಮಿತ್ರ ಒಂದು ಫರ್ಮಿಗೆ ೧೦೦ ಚೀಲ ಅಕ್ಕಿ ಕೊಡುವುದಾಗಿ ಒಂದು ದಿನ ನಿಶ್ಚಯಿಸಿದ್ದ. ಫರ್ಮಿಗೆ ಆ ದಿನವೇ ಆ ಅಕ್ಕಿ ಅಗತ್ಯವಾಗಿತ್ತು. ಎಂತಲೇ ಅದು ತುಸು ಹೆಚ್ಚು ಬೆಲೆಗೇ ಈ ವ್ಯವಹಾರ ನಡೆಸಿತ್ತು.

ಆದರೆ ನಿಶ್ಚಿತದಿನ ಅಪಘಾತವೊಂದು ನಡೆದುದರಿಂದ ಅಕ್ಕಿ ಕಳುಹಲಾಗಲಿಲ್ಲ. ಫರ್ಮ್ ತನ್ನಮೇಲೆ ದಾವೆ ಹೂಡಲಿದೆಯೆಂದು ನನ್ನ ಮಿತ್ರನಿಗೆ ಮುಂದೆ ತಿಳಿಯಿತು.

ತಾನುಕೂಡ ಕೋರ್ಟಿನಲ್ಲಿ ಉತ್ತರಿಸುವೆನೆಂದು ನಮ್ಮ ಗೆಳೆಯ ಯೋಚಿಸಲಿಲ್ಲ. ಆತ ತಡಮಾಡದೆ ಫರ್ಮಿನ ಮಾಲಿಕನ ಬಳಿ ಸಾಗಿ ತಪ್ಪಿಗಾಗಿ ಕ್ಷಮೆಯಾಚಿಸಿ—'ಏನು ಮಾಡಲೀ ಅಂದೇ ನನ್ನ ಹುಡುಗ ಅಪಘಾತಕ್ಕೀಡಾಗಿ ಆಸ್ಪತ್ರೆಗೆ ಹೋದ. ಅವನ ಆರೈಕೆಯಲ್ಲೇ ಇಡೀ ದಿನ ಕಳೆಯಿತು. ಬೇರಾರೂ ಇಲ್ಲದುದರಿಂದ ಅಕ್ಕಿಯನ್ನು ಕಳಿಸಲಾಗಲಿಲ್ಲ. ನನ್ನೀ ತಪ್ಪಿನಿಂದ ನಿಮಗಾದ ನಷ್ಟವನ್ನು ತುಂಬಿಕೊಡಲು ಸಿದ್ಧ.' ಎಂದ.

ಫರ್ಮಿನ ಮಾಲಿಕನ ವ್ಯವಹಾರ ಒಮ್ಮೆಲೇ ಬದಲಾಯಿತು, ಆತ ಸಹಾನುಭೂತಿಯಿಂದ ಹುಡುಗನ ಆರೋಗ್ಯವಿಚಾರಿಸಿದ.

'ಅಕ್ಕಿ ಸಿದ್ಧವಿದೆ. ಬೇಕಿದ್ದರೆ ನಾಳೆಯೇ ಕಳುಹಿಸುವೆ'—ಎಂದ ಮಿತ್ರ. ಮಾಲಿಕನ ಒಪ್ಪಿಗೆ ದೊರೆಯಿತು. ಅದೇ ದರದಲ್ಲಿ ಯಾವುದೇ ದಂಡ ತೆರದ ಈ ವ್ಯವಹಾರ ನಡೆಯಿತು.

ಯಾವುದೇ ಕಾನೂನು ಗೆಳೆಯನಿಗೆ ಈ ಸೌಲಭ್ಯ ಒದಗಿಸಲಾರದು.

ನಾವು ಪರಸ್ಪರ ಭೇಟಿಯಾಗಿ ಮಾತುಕತೆ ನಡೆಸದಿದ್ದರೆ ಇತರರು ಸ್ವಾರ್ಥದಿಂದ ಪರಿಸ್ಥಿತಿಯನ್ನು ಇನ್ನಷ್ಟು ಹದಗೆಡಿಸುತ್ತಾರೆ. ಒಂದೇ ವಿಷಯದಲ್ಲಿ ಇತರರ ಚಾಡಿ ಕೇಳಿ ನಾವು ಆ ಮಾತನ್ನು ನಿಜವೆಂದು ನಂಬಿ ಬಿಡುತ್ತೇವೆ. ಪರಿಣಾಮವಾಗಿ ನಮ್ಮ ಆತ್ಮೀಯರನ್ನೂ ಸಂದೇಹದೃಷ್ಟಿಯಿಂದ ನೋಡತೊಡಗುತ್ತೇವೆ.

ನನ್ನ ಪರಿಚಿತರೊಬ್ಬರು ವಸ್ತ್ರೋದ್ಯಮಿಗಳು ಉತ್ಪಾದನಶುಲ್ಕಾಧಿಕಾರಿಗಳಿಗೂ ಅವರಿಗೂ ಒಳ್ಳೇ ಸಂಬಂಧವಿತ್ತು. ಕೆಲವರು ಇದನ್ನು ಕಂಡು ಮತ್ತರಿಸುತ್ತಿದ್ದರು.

ಒಮ್ಮೆ ಈ ಪರಿಚಿತರು ಕಾಹಿಲೆಬಿದ್ದು ಒಂದೆರಡು ತಿಂಗಳವರೆಗೆ ಅಧಿಕಾರಿಯನ್ನು ಭೇಟಿಯಾಗದಾದರು. ಈ ಅವಧಿಯಲ್ಲಿ ಅವರ ಹಿತಶತ್ರುಗಳು ಅಧಿಕಾರಿಗಳ ಕಿವಿತುಂಬಿಸಿ— 'ನಿಮ್ಮ ಸೇವೆ ಮಾಡಿ ಮಾಡಿ ಸೋತುಹೋಗಿದ್ದೇನೆ ಎನ್ನುತ್ತಿದ್ದಾನೆ ಆತ !' — ಎಂದು ಹೇಳಿದರು. ಆದರೆ ವಿವೇಕಿಯಾದ ಆ ಅಧಿಕಾರಿಗಳು ಸುಮ್ಮನಿದ್ದರು.

ಕಾಹಿಲೆಯಿಂದೆದ್ದ ಬಳಿಕ ಪರಿಚಿತರು ಹಿಂದಿನಂತೆಯೇ ಅಧಿಕಾರಿಗಳಲ್ಲಿಗೆ ಹೋದರು. ತಮ್ಮ ಕಾಹಿಲೆಯಬಗ್ಗೆ ಹೇಳಿದಾಗ ವಿರೋಧಿಗಳ ಸಂಚು ಪತ್ತೆಯಾಯಿತು. ಈ ರೀತಿ ಭೇಟಿಯಿಂದಲೇ ತಪ್ಪು ಭಾವನೆ ದೂರಾಗಬಲ್ಲುದು.

ನಾವು ಪರಸ್ಪರ ಮಾತುಕತೆನಡೆಸಿ ಯಾವುದಾದರೂ ಸಮಸ್ಯೆ ಬಿಡಿಸುತ್ತಿದ್ದರೆ, ಆ ವೇಳೆ ತಿರಸ್ಕಾರವಾಗಲೀ ದೊಡ್ಡಸ್ತಿಕೆಯ ಭಾವವಾಗಲೀ ನಮ್ಮ ಮನದಲ್ಲಿ ಮೂಡಬಾರದು.

ಅಲ್ಲದೆ ಸಂದರ್ಭಕ್ಕೆ ತಕ್ಕಂತೆ ತುಸು ಬಾಗುವ ನೀತಿಯನ್ನು ನಾವು ಅನುಸರಿಸಬೇಕು. ಮುಖ್ಯವಾಗಿ, ನಮ್ಮಿಂದಲೇ ತಪ್ಪಾಗಿದ್ದರೆ ಇದು ಅತ್ಯಗತ್ಯ.

ಇತರರನ್ನು ಬೆದರಿಸಿ ವಿಜಯ ಸಾಧಿಸುವ ದೃಷ್ಟಿಯಿಂದ ಅಲ್ಲಸಲ್ಲದ ಆರೋಪ ಹೊರಿಸುವುದು ಬಾಯಿಯಿದೆಯೆಂದು ಸುಳ್ಳು ಸುಳ್ಳೇ ಹೇಳಿ ಇತರರ ಬಾಯಿ ಮುಚ್ಚಿಸಲೆಳಸುವುದು ಮೂರ್ಖತನ. ಇದರಿಂದ ಸಮಾಜದಲ್ಲಷ್ಟೇ ಅಲ್ಲ—ಪರಿವಾರದಲ್ಲೂ ಕಮತನ ಕಾಣಿಸಿಕೊಳ್ಳುವುದು.

ಒಟ್ಟಾರೆ, ಭೇಟಿ ಹಾಗೂ ಮಾತುಕತೆಯ ಪೂರ್ಣಲಾಭಪಡೆಯುತ್ತ ಯಾವುದಾದರೂ ಸೂಕ್ತ ಪರಿಹಾರಕ್ಕೆ ತಲುಪಲು ಪ್ರಾಮಾಣಿಕವಾಗಿ ಯತ್ನಿಸಬೇಕು.

(ಹಿಂದಿಯಿಂದ)



# ಮೃತ್ಯುಸಮುದ್ರ

ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

ಮೃತ್ಯುಸಮುದ್ರವು ವಿಶ್ವದ ಅಚ್ಚರಿ: ಅನುಪಮ ಸೃಷ್ಟಿ ವೈಚಿತ್ರ್ಯ, ಇದರ ನೀರಿನ ಮಟ್ಟ ಸರಾಸರಿ ಸಮುದ್ರ ಮಟ್ಟಕ್ಕಿಂತ 1300 ಅಡಿಗಳಷ್ಟು ಕೆಳಗಿದೆ. ಇದು ಪೃಥ್ವಿಯ ಅತ್ಯಂತ ತಗ್ಗಾದ ಜಲಾಶಯ.

ಇದರ ನೀರಿಗೆ ಯಾರು ಬಿದ್ದರೂ ಮುಳುಗಲೇ ಸಾಧ್ಯವಿಲ್ಲ, ಮೈ ಒದ್ದೆಯಾಗುವುದೂ ಇಲ್ಲ, ಮೈಮೇಲೆ ಬಿದ್ದ ನೀರು ಪುಷ್ಪಗಳ ಮೇಲೆ ಬಿದ್ದ ಇಬ್ಬನಿ ಹನಿಗಳಂತೆ ಜಾರಿಹೋಗುತ್ತದೆ.

ರೋಮನ್ ಚಕ್ರವರ್ತಿ ಟಾಯ್‌ಟಸ್ ಎಂಬಾತ ಇಸ್ರೇಲರನ್ನು ಜಯಿಸಿದಾಗ ಯುದ್ಧ ಕೈದಿಗಳನ್ನು ಈ ಸಮುದ್ರಕ್ಕೆ ತಳ್ಳಿಬಿಡುವಂತೆ ಆಜ್ಞಾಪಿಸಿದ. ಆ ಸಾವಿರಾರು ಕೈದಿಗಳಲ್ಲಿ ಯಾರು ನೀರಿನಲ್ಲಿ ಮುಳುಗಲೇ ಇಲ್ಲ. ಎಲ್ಲರೂ ಆಚೆ ಬದಿಯನ್ನು ದಾಟಿ ಪಾರಾದರು. ಈ ಸಮುದ್ರದ ಮೇಲೆ ಮಲಗಿಕೊಂಡು ಓದಬಹುದು ; ನಡೆದುಕೊಂಡು ಹೋಗಬಹುದು ; ಮಲಗಿ ನಿದ್ರೆ ಮಾಡಬಹುದು

ಈಜಲು ಬಾರದವರೂ ಅಂಜಬೇಕಾದ್ದಿಲ್ಲ, ಅವರು ನೀರಿಗೆ ಬೀಳಲು ಅನುಮಾನಿಸಿದರೆ ಅವರನ್ನು ನೀರಿಗೆ ತಳ್ಳಿಬಿಡುವುದು ಒಂದು ವಿನೋದ. ಈ ಸಮುದ್ರದಲ್ಲಿ ಈಜಲು ಸರಕಾರಕ್ಕೆ ಒಬ್ಬೊಬ್ಬರೂ ಒಂಬತ್ತು ರೂಪಾಯಿ ರುಸುಮು ಕೊಡಬೇಕು. ಇದರಲ್ಲಿ ಒಂದು ಜೀವಂತ ಪ್ರಾಣಿಯು ಇಲ್ಲ.

ಈ ಸಮುದ್ರದಲ್ಲಿ ಲವಣಾಂಶ ಇತರ ಎಲ್ಲಾ ಸಮುದ್ರಗಳಿಗಿಂತ ಆರು ಪಾಲು ಹೆಚ್ಚು. ಸಮುದ್ರದಲ್ಲಿ ಸಾಮಾನ್ಯವಾಗಿ ಶೇಕಡಾ 4-6 ರಷ್ಟು ಲವಣಗಳಿರುತ್ತವೆ ಇದರ ನೀರಿನಲ್ಲಿ ಶೇಕಡಾ 30-32 ರಷ್ಟು ವಿವಿಧ ಲವಣಗಳಿವೆ, ಉಪ್ಪು ವಿಪರೀತವಿರುವ ಅಮೇರಿಕದ "ಲವಣ ಸರೋವರ" (Salt lake) ದಲ್ಲಿ ಕೂಡ ಶೇಕಡಾ 28 ರಷ್ಟು ಲವಣವಿದೆ. ಮೃತ್ಯುಸರೋವರ ಅದನ್ನೂ ಮೀರಿಸುತ್ತದೆ. ಈ ಕಾರಣದಿಂದ ಇತರ ಸಮುದ್ರಗಳಲ್ಲಿ ಯಥೇಚ್ಛವಾಗಿ ನೆಲಸಿರುವ ಯಾವುದೊಂದು ಪ್ರಾಣಿಜಾತಿಯೂ ಈ ಸಮುದ್ರದಲ್ಲಿ ಜೀವಿಸಲು ಸಾಧ್ಯವಿಲ್ಲ. ಆದ್ದರಿಂದ ಇದಕ್ಕೆ "ಮೃತ್ಯು ಸಮುದ್ರ" (Dead Sea) ಎಂಬ ಹೆಸರು.

ಜೋರ್ಡಾನ್ ದೇಶಕ್ಕೂ ಇಸ್ರೇಲಿಗೂ ನಡುವೆ ಇರುವ ಈ ಸಮುದ್ರಕ್ಕೆ ಜೋರ್ಡಾನ್ ಮತ್ತು ಇತರ ಸಣ್ಣ ನದಿಗಳಿಂದ ದಿನವೂ 60 ಲಕ್ಷ ಗ್ಯಾಲನ್ ನೀರು ಬಂದು ಬೀಳುತ್ತದೆ. ಇದು ಅಪಾರ ಲವಣಗಳನ್ನು ಈ ಸಮುದ್ರಕ್ಕೆ ಸೇರಿಸುತ್ತದೆ. ಉರಿ ಬಿಸಿಲಿನ ಮರುಭೂಮಿಯಲ್ಲಿರುವ ಈ ಸಮುದ್ರದ ಸುತ್ತ ಮುತ್ತಲ ಪ್ರದೇಶಗಳಲ್ಲಿ ಉಷ್ಣತಾಮಾನವು ಚಳಿಗಾಲದಲ್ಲೂ 70° ಪ್ಯಾರನ್‌ಹೀಟ್‌ನಷ್ಟು ಇರುತ್ತದೆ. ಬೇಸಿಗೆಯಲ್ಲಿ ಅದು 140 ಡಿಗ್ರಿಗಳಿಗೆ ಏರುತ್ತದೆ. ಕುಡಿಯಲು ಒಂದು ತೊಟ್ಟು ನೀರೂ ಇಲ್ಲ. ಗಿಡ ಮರಗಳಿಲ್ಲ, ಸಣ್ಣ ಪೊದೆಕೂಡ ಇಲ್ಲ. ಮೈಯಿಂದ ಬೆವರು ಪ್ರವಾಹದಂತೆ ಸುರಿಯುತ್ತದೆ. ವಾತಾವರಣ ಸುಣ್ಣ ಮತ್ತು ಗಂಧಕದ ವಾಸನೆಯಿಂದಲೂ, ಲವಣಗಳ ಕಣದಿಂದಲೂ ತುಂಬಿರುತ್ತದೆ. ನೆಲ, ನೀರು, ಕೆಂಪು ಗುಡ್ಡಗಳಿಂದ ಪ್ರತಿಫಲಿಸಿ ಕಣ್ಣುಗಳನ್ನು ಕೋರೈಸಿ ಕುಕ್ಕುವ ಉರಿ ಬಿಸಿಲಿನ ಜಳ.

ಇಲ್ಲಿ ವರ್ಷದಲ್ಲಿ ಸರಾಸರಿ ಐದು ಅಂಗುಲದಷ್ಟು ಮಾತ್ರ ಮಳೆ ಬೀಳುತ್ತದೆ. ಈ ಕಾರಣಗಳಿಂದ ನದಿಗಳಿಂದ ಬಂದ ನೀರೆಲ್ಲ ಆವಿಯಾಗಿ ಹೋಗಿ, ಸಮುದ್ರದ ನೀರು ಹೆಚ್ಚದೆ ಲವಣಗಳು ಹೆಚ್ಚು ಹೆಚ್ಚಾಗಿ ಶೇಖರವಾಗುತ್ತವೆ. ಅಗಾಧ ಲವಣ ರಾಶಿಗಳಿಂದ ನೀರು ಬಹಳ ಮಂದವಾಗಿರುವುದರಿಂದ ಅದರಲ್ಲಿ ಮುಳುಗಲೇ ಸಾಧ್ಯವಿಲ್ಲ.

ಅಂಡಾಕಾರದ ಈ ಮೃತ್ಯುಸಮುದ್ರಕ್ಕೆ ಸಮುದ್ರವೆಂದು ಹೆಸರಿದ್ದರೂ ಅದು ಇತರ ಸಮುದ್ರಗಳಂತೆ ದೊಡ್ಡದಲ್ಲ. 40 ಮೈಲು ಉದ್ದ 10 ಮೈಲು ಅಗಲ,

1200 ಅಡಿ ಆಳ, 30 ಲಕ್ಷ ವರ್ಷಗಳ ಹಿಂದೆ ಇದು ಹೊರಗಿನ ಸಾಗರಕ್ಕೆ ಸೇರಿಕೊಂಡಿತ್ತೆಂದು ಭೂ ವಿಜ್ಞಾನಿಗಳ ಅಭಿಪ್ರಾಯ. ಹತ್ತು ಲಕ್ಷ ವರ್ಷಗಳಿಂದೀಚೆಗೆ ಆ ಸಂಬಂಧ ಮುರಿದುಹೋಗಿ ಅಂದಿನಿಂದ ಇಲ್ಲಿ ಲವಣಗಳ ಪ್ರಮಾಣ ವಿಪರೀತ ಹೆಚ್ಚಾಯಿತು.

10-12 ಸಾವಿರ ವರ್ಷಗಳ ಹಿಂದೆ ಇದು 400 ಮೈಲು ಉದ್ದವಾಗಿತ್ತು. ಭೂಕಂಪಗಳು ಬಂದು ಅಗಲ, ಆಳ ಕಡಿಮೆಯಾದವು, 15 ಶತಮಾನಗಳ ಹಿಂದೆ ಇದು ಬಹು ಚಿಕ್ಕದಾಯಿತು. ಭೌತಿಕ ಕಾರಣಗಳಿಂದ ವಿಸ್ತಾರ ಪುನಃ ಹೆಚ್ಚಿತು. ಈಗ 65 ವರ್ಷಗಳಿಂದ ಅದರ ಆಳ ವರ್ಷಕ್ಕೆ ಆರಂಗುಲದಷ್ಟು ಕಡಿಮೆಯಾಗುತ್ತಿದೆ. ಮೇಲಿನ 120 ಅಡಿಗಳಿಗಿಂತ ಕೆಳಗಿನ ನೀರು ಸಾವಿರಾರು ವರ್ಷಗಳ ಹಿಂದಿನದು, ಭೂ ಬದಲಾವಣೆಗಳ ಕುರುಹುಗಳು ಈಗಲೂ ಇವೆ. ಈ ಸಮುದ್ರದ ದಡದಲ್ಲಿ ನೀರಿನ ಮಟ್ಟಕ್ಕಿಂತ 600 ಅಡಿ ಎತ್ತರವಾದ ಉಪ್ಪಿನ ಗುಡ್ಡವಿದೆ. ಅದನ್ನು ಕೊರೆದು ಪರೀಕ್ಷಿಸಿದಾಗ 10,000 ಅಡಿ ಆಳದವರೆಗೂ ಲವಣವಿದ್ದದ್ದು ತಿಳಿದು ಬಂತು.

ಈ ನೀರಿನಲ್ಲಿ ಚರ್ಮರೋಗಗಳನ್ನು ಗುಣಪಡಿಸುವ ರಾಸಾಯನಿಕ ವಸ್ತುಗಳಿರುವುದರಿಂದ ಚರ್ಮರೋಗಿಗಳ ಗುಂಪುಗಳು ಸ್ನಾನಕ್ಕೆ ಬರುತ್ತಿರುತ್ತವೆ. ಸಮುದ್ರದ ಬದಿಯ ಸುತ್ತಮುತ್ತಲ ಮಣ್ಣಿನಲ್ಲೂ ಈ ರಾಸಾಸನಿಕಗಳಿವೆ, ಆದ್ದರಿಂದ ಚರ್ಮರೋಗಿಗಳು ಈ ಮಣ್ಣನ್ನು ಮೈಗೆ ಬಳಿದುಕೊಳ್ಳುತ್ತಾರೆ. ತೆಗೆದುಕೊಂಡು ಹೋಗುತ್ತಾರೆ.

ಸುಮಾರು 50 ವರ್ಷಗಳ ಹಿಂದೆ ಒಬ್ಬ ಶ್ರೀಮಂತ ರಷಿಯನ್ ಯಹೂದಿ ಈ ನೀರಿನಿಂದ ವಿವಿಧ ರಾಯಾಯನಿಕಗಳನ್ನು ಬೇರ್ಪಡಿಸುವ ಯೋಜನೆಯನ್ನು ಹೂಡಿ ಇದಕ್ಕಾಗಿ ಒಂದು ಕಾರ್ಖಾನೆಯನ್ನೂ, ಕಾರೇಗಾರರಿಗೆ ವಸತಿ ಗೃಹಗಳನ್ನೂ 1930 ರಲ್ಲಿ ಕಟ್ಟಿಸಿದ. 18 ವರ್ಷಗಳ ನಂತರ ಅರಬ್ ರಾಷ್ಟ್ರಗಳು ಇಸ್ರೇಲನ್ನು ದಾಳಿಮಾಡಿದಾಗ ಈ ಕಾರ್ಖಾನೆಯನ್ನು ನಾಶಮಾಡಿದವು.

ಈಗ ಹೊಸ ಕಾರ್ಖಾನೆಯೊಂದು ಸ್ಥಾಪಿತವಾಗಿ ಅಲ್ಲಿ ಭಾರಿ ಉದ್ಯಮಗಳು ನಡೆಯುತ್ತಿವೆ. ಈ ಕೈಗಾರಿಕೆಯಲ್ಲಿ ಮೃತ್ಯುಸಮುದ್ರದ ನೀರಿನಿಂದ ಕ್ಯಾಲ್ಸಿಯಂ ಕ್ಲೋರೈಡ್, ಕ್ಯಾಲ್ಸಿಯಂ ಸಲ್ಫೇಟ್, ಮೆಗ್ನೀಸಿಯಂ ಕ್ಲೋರೈಡ್, ಮೆಗ್ನೀಸಿಯಂ ಬ್ರೋಮೈಡ್, ಪೊಟಾಸಿಯಂ ಕ್ಲೋರೈಡ್ ಮುಂತಾದ ಹಲವಾರು ರಾಸಾಯನಿಕ ಪದಾರ್ಥಗಳನ್ನು ತಯಾರಿಸುತ್ತಾರೆ.

ವರ್ಷಕ್ಕೆ 2¼ ಲಕ್ಷ ಟನ್ನಿನಷ್ಟು ಪೊಟ್ಯಾಷ್ ಗೊಬ್ಬರವಾಗುತ್ತದೆ. ಇವು ಕಾಗದ, ಸಾಬೂನುಗಳ ಕೈಗಾರಿಕೆಗೂ ನೆರವಾಗುತ್ತವೆ. ಸಮುದ್ರದ ನೀರಿನಿಂದ ಛಟ್ಟಿ ಇಳಿಸುವ ಬ್ರೋಮಿನ್ ಎಂಬ ರಸಾಯನವು ಔಷಧ ಮತ್ತು ಫೋಟೋ ಸಲಕರಣೆಗೆ ಉಪಯುಕ್ತವಾಗಿವೆ. ಈ ರಾಸಾಯನಿಕಗಳು 40 ದೇಶಗಳಿಗೆ ರಫ್ತಾಗಿ, ಇಸ್ರೇಲಿಗೆ ವರ್ಷಕ್ಕೆ 11 ಕೋಟಿ ರೂಪಾಯಿಯ ವರಮಾನ ದೊರೆಯುತ್ತದೆ.

ಮೂವತ್ತು ವರ್ಷಗಳ ಹಿಂದೆ ಸಮುದ್ರತೀರದ ಬಂಡೆಗಳ ಗುಹೆಗಳಲ್ಲಿ ಭೂರ್ಜಪತ್ರ ಮತ್ತು ಕುರಿಯ ಚರ್ಮದ ಮೇಲೆ ಬರೆದಿದ್ದ ಅನೇಕ ಪ್ರಾಚೀನ ಪತ್ರಗಳೂ, ಹಸ್ತಪ್ರತಿಗಳೂ ಸಿಕ್ಕಿದವು. ಅವುಗಳ ಶೋಧನೆಯಿಂದ ಅವು ಯಹೂದಿ ಜನಾಂಗಗಳ ಧಾರ್ಮಿಕ ಗ್ರಂಥಗಳೆಂದೂ, ಕ್ರಿಸ್ತನ ಹಿಂದಿನ ಕಾಲದ ಪ್ರಕರಣಗಳೆಂದೂ, ಚರಿತ್ರೆಗಳೆಂದೂ, ಕಂಡುಬಂದವು. ಅವುಗಳು ಗ್ರೀಕ್ ಮತ್ತು ಹೀಬ್ರೂ ಭಾಷೆಗಳಲ್ಲಿದ್ದವು. ಅಲ್ಲಿ ಒಂದು ಪುರಾತನ ನಗರವಿತ್ತೆಂದೂ, ಕ್ರಿ. ಪೂ. 30 ರಲ್ಲಿ ಭೂಕಂಪವಾಗಿ ಅಲ್ಲಿದ್ದವರೆಲ್ಲರೂ ಅಲ್ಲಿಂದ ಹೊರಟು ಹೋದರೆಂದೂ ತಿಳಿದುಬಂದಿದೆ. ಅದು ಕ್ರಿ. ಪೂ. 4ರಲ್ಲಿ ಪುನರ್ನಿಮಿತವಾಯಿತು. ಕ್ರಿ. ಶ. 69 ರಲ್ಲಿ ರೋಮನ್ನರು ಅದನ್ನು ಮುತ್ತಿ ಯಹೂದಿಗಳನ್ನು ಬಹಳ ಹಿಂಸಿಸಿದರು. ಆಗ ಯಹೂದಿಗಳು ತಮ್ಮ ಧಾರ್ಮಿಕ ಗ್ರಂಥಗಳನ್ನು ಈ ಗುಹೆಗಳಲ್ಲಿ ಬಚ್ಚಿಟ್ಟು ಪಲಾಯನ ಮಾಡಿದರು. ಹತ್ತೊಂಬತ್ತು ಶತಮಾನಗಳ ಕಾಲ ಅವು ಕಗ್ಗತ್ತಲೆಯಲ್ಲಿ ಗುಪ್ತವಾಗಿದ್ದು ಈಗೀಗ ಬೆಳಕಿಗೆ ಬಂದಿವೆ.

●

LICENCED TO POST WITHOUT PRE PAYMENT LICENCE NO. 3
Registred with the Registrar of News papers for India under No. 17139/69
Siddaganga Monthly Magazine Siddaganga. Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.